CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮಾರ್ಚ್ ೧೮, ೨೦೦೪ (ಫಾಲ್ಗುಣ ೨೮, ಶಕ ವರ್ಷ ೧೯೨೫) | ಸಂಚಿಕೆ ೧೨ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಡಿ.ಎಸ್. ಶಿವಣ್ಣ, ಸರ್ಕಾರದ ಉಪ ಕಾರ್ಯದರ್ಶಿ, ಕಾನೂನು ಇಲಾಖೆ ಇವರಿಗೆ ವೇತನ ರಹಿತ ರಜೆ ಮಂಜುರಾತಿ ಬಗ್ಗೆ.

**ಓದಲಾಗಿದೆ:** ಯೋಜನೆ ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಸಹ ಕಾರ್ಯದರ್ಶಿಯವರ ಟಿಪ್ಪಣಿಗಳ ಸಂಖ್ಯೆ: ಪಿಡಿ/ಜೆಎಸ್/528/99 ಹಾಗೂ ದಿನಾಂಕ: 30.12.1989.

**ಪ್ರಸ್ತಾವನೆ:**

ಶ್ರೀ ಡಿ.ಎಸ್. ಶಿವಣ್ಣ, ಸರ್ಕಾರದ ಉಪ ಕಾರ್ಯದರ್ಶಿ, ಕಾನೂನು ಇಲಾಖೆ ಇವರು ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಕೆಳಕಂಡ ದಿನಾಂಕಗಳಂದು ಕಛೇರಿಗೆ ಅನಧಿಕೃತವಾಗಿ ಗೈರು ಹಾಜರಾಗಿರುವರೆಂದು ತಿಳಿಸಿ, ಸದರಿ ಅವಧಿಗಳಿಗೆ ವೇತನ ರಹಿತ ರಜೆ ಎಂದು ಪರಿಗಣಿಸಿ, ಆದೇಶ ಹೊರಡಿಸುವಂತೆ ಅಂದಿನ ಸಹ ಕಾರ್ಯದರ್ಶಿ, ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರು ಮೇಲೆ ಓದಲಾದ ದಿನಾಂಕ: 17.12.1999 ಮತ್ತು 30.12.1999ರ ಟಿಪ್ಪಣಿಗಳಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

1. ದಿನಾಂಕ: 1.12.1999 ರಿಂದ 16.12.1999 (ದಿನಾಂಕ: 5.12.99, 11.12.99 ಹಾಗೂ 12.12.1999 ಗಳಂದಿನ ಸಾರ್ವತ್ರಿಕ ರಜಾ ದಿನಗಳನ್ನು ಹೊರತುಪಡಿಸಿ) (ಒಟ್ಟು 13 ದಿನಗಳು)
2. ದಿನಾಂಕ: 20.12.1999 ರಿಂದ 23.12.1999 ರವರೆಗೆ ಹಾಗೂ ದಿನಾಂಕ: 27.12.1999 ರಿಂದ 29.12.1999 ರವರೆಗೆ (ಒಟ್ಟು 7 ದಿನಗಳು).

ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 274 ಸಆರ 99, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2004**

ಶ್ರೀ ಡಿ.ಎಸ್. ಶಿವಣ್ಣ, ಸರ್ಕಾರದ ಉಪ ಕಾರ್ಯದರ್ಶಿ, ಕಾನೂನು ಇಲಾಖೆ ಇವರು ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಈ ಕೆಳಕಂಡ ದಿನಾಂಕಗಳಂದು ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಒಟ್ಟು 20 ದಿನಗಳ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 106-ಎ ರಡಿಯಲ್ಲಿ ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ.

1. ದಿನಾಂಕ: 1.12.1999 ರಿಂದ 16.12.1999 (ದಿನಾಂಕ: 5.12.99, 11.12.99 ಹಾಗೂ 12.12.1999 ಗಳಂದಿನ ಸಾರ್ವತ್ರಿಕ ರಜಾ ದಿನಗಳನ್ನು ಹೊರತುಪಡಿಸಿ) (ಒಟ್ಟು 13 ದಿನಗಳು)
2. ದಿನಾಂಕ: 20.12.1999 ರಿಂದ 23.12.1999 ರವರೆಗೆ ಹಾಗೂ ದಿನಾಂಕ: 27.12.1999 ರಿಂದ 29.12.1999 ರವರೆಗೆ (ಒಟ್ಟು 7 ದಿನಗಳು).

ಹಾಗೂ ಈ ಗೈರು ಹಾಜರಿಯ ಅವಧಿಯನ್ನು ಅವರ ಖಾತೆಯಲ್ಲಿ ಜಮೆ ಇರುವ 10 ದಿನಗಳು ಅರ್ಧ ವೇತನ ರಜೆಗೆ ಹಾಗೂ ಉಳಿದ 10 ದಿನಗಳನ್ನು ಅಸಾಧಾರಣ ರಜೆಗೆ ಲೆಕ್ಕ ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 184

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಕಂದಾಯ ಸಚಿವಾಲಯ

**ವಿಷಯ:** ಕೆ.ಎ.ಎಸ್. ಅಧಿಕಾರಿಗಳಿಗೆ, ತಹಶೀಲ್ದಾರ್‌ರ ವೃಂದದಲ್ಲಿ ಕಾಲಮಿತಿ ವೇತನ ಬಡ್ತಿ ಹಾಗೂ ಸ್ವಯಂಚಾಲಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಸಿಆಸುಇ 02 ಎಸ್‌ಕೆಜಿ 89, ದಿನಾಂಕ: 30.4.1990.

2) ಅಧಿಸೂಚನೆ ಸಂಖ್ಯೆ: ಸಿಆಸುಇ 02 ಎಸ್‌ಕೆಜಿ 94 (1), ದಿನಾಂಕ: 2.7.1999.

3) ಅಧಿಸೂಚನೆ ಸಂಖ್ಯೆ: ಸಿಆಸುಇ 03 ಎಸ್‌ಕೆಜಿ 2000, ದಿನಾಂಕ: 4.7.2000.

4) ಅಧಿಕಾರಿಗಳ ಮನವಿಗಳು.

**ಪ್ರಸ್ತಾವನೆ:**

ಪ್ರಸಕ್ತ ಕೆ.ಎ.ಎಸ್. ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳು ಮನವಿಗಳನ್ನು ಸಲ್ಲಿಸಿ, ಅವರುಗಳು ತಹಶೀಲ್ದಾರ್ ವೃಂದಕ್ಕೆ ನೇರವಾಗಿ ಆಯ್ಕೆಯಾಗಿ ನಂತರ ಕೆ.ಎ.ಎಸ್. (ಕಿ.ಶ್ರೇ.) ವೃಂದಕ್ಕೆ ಬಡ್ತಿ ಪಡೆದಿದ್ದಾಗಿ ತಿಳಿಸಿ, ತದನಂತರ ಸರ್ಕಾರವು ಕೆ.ಎ.ಎಸ್. (ಕಿ.ಶ್ರೇ.) ವೃಂದಕ್ಕೆ ನೀಡಿದ ಬಡ್ತಿಗಳನ್ನು ಪುನರಾವಲೋಕಿಸಿ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿದ್ದು, ಅದರಲ್ಲಿ ತಮಗೆ ನೀಡಿರುವ ಬಡ್ತಿಯ ದಿನಾಂಕವು ವಾಸ್ತವವಾಗಿ ಬಡ್ತಿ ಪಡೆದ ದಿನಾಂಕಕ್ಕಿಂತ ಮುಂದೂಡಲಾಗಿರುತ್ತದೆ. ಇದರಿಂದ ತಾವು ತಹಶೀಲ್ದಾರ್‌ರ ವೃಂದದಲ್ಲಿಯೇ ಸತತವಾಗಿ 15 ವರ್ಷಗಳ ಸೇವೆ ಸಲ್ಲಿಸಿದಂತಾಗಿರುವುದರಿಂದ, ತಮಗೆ 10 ವರ್ಷದ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷದ ಸ್ವಯಂಚಾಲಿತ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿದ್ದಾರೆ.

| | **ಶ್ರೀಯುತರಾದ:** | | |
|---|---|---|---|
| 1) | ಮಹ್ಮದ್ ರಫೀಕ್ ಅಹಮದ್ (ನಿವೃತ್ತ) | 15) | ಹೆಚ್.ಎಸ್. ರತ್ನಾಕರ್ |
| 2) | ಎಸ್. ಸೋಮನಾಥ್ (ನಿವೃತ್ತ) | 16) | ಯು. ಕುನ್ನನ್ನಾ ನಾಯ್ಕ್ |
| 3) | ಎನ್.ಆರ್. ಸುಬ್ಬರಾವ್ | 17) | ಬಿ. ಕೊರಗ ನಾಯ್ಕ್ |
| 4) | ಆರ್.ಎಸ್. ರಾಜಗೋಪಾಲ ರಾವ್ | 18) | ಎನ್. ಶಾಂತಪ್ಪ |
| 5) | ಯು.ಎಸ್. ನಜ್ಹೂರ್ | 19) | ಬಿ.ಎಸ್. ಬಿದರಿಮಠ |
| 6) | ಎ.ಎಲ್. ರಂಗನಾಥ | 20) | ಎಸ್.ಎನ್. ನಾಯ್ಕ್ |
| 7) | ಐ.ಎಂ. ಪ್ರಭಾಕರ್ | 21) | ಸಿ. ಕೃಷ್ಣೇಗೌಡ |
| 8) | ವಿ. ರಾಮಣ್ಣ | 22) | ಕೆ. ಮಲ್ಲಿನಾಥ (ನಿವೃತ್ತ) |
| 9) | ಎಂ.ಎಸ್. ಉಮೇಶ್ ಚಂದ್ರ | 23) | ಬಿ. ಶ್ರೀಧರ್ |
| 10) | ಜೆ. ಅಶ್ವಥ್ (ನಿವೃತ್ತ) | 24) | ಜೆ.ಎ. ಅಡಗಟ್ಟಿ |
| 11) | ಜೆ.ಎಸ್. ವಿರೂಪಾಕ್ಷಯ್ಯ | 25) | ಎಂ.ಎಸ್. ಚನ್ನಪ್ಪಗೌಡರ |
| 12) | ಇ. ರಾಧಾಕೃಷ್ಣ | 26) | ಎಲ್. ರಬೀಂದ್ರ |
| 13) | ಎಂ.ಎನ್. ವಿಶ್ವನಾಥಯ್ಯ | 27) | ಕೆ. ಪಾರ್ವತಿ ತಿಮ್ಮಯ್ಯ |
| 14) | ಆರೀಫ್ ಉಲ್ಲಾ ಷರೀಫ್ | | |

ಈ ಎಲ್ಲಾ ಅಧಿಕಾರಿಗಳ ಕೋರಿಕೆಗಳನ್ನು ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 01 ಎಸ್‌ಆರ್‌ಸಿ 85, ದಿನಾಂಕ: 22.1.1985 ಹಾಗೂ ಕರ್ನಾಟಕ ನಾಗರೀಕ ಸೇವಾ (ಸ್ವಯಂಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು 1991ರ ಪ್ರಕಾರ ಪರಿಶೀಲಿಸಿ ಇವರುಗಳಿಗೆ ಕಾಲಮಿತಿ ವೇತನ ಬಡ್ತಿ ಹಾಗೂ ಸ್ವಯಂಚಾಲಿತ ವಿಶೇಷ ವೇತನ ಬಡ್ತಿಯನ್ನು ಮಂಜೂರು ಮಾಡಲು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 250 ಎಎಸ್‌ಡಿ 2003, ಬೆಂಗಳೂರು, ದಿನಾಂಕ: 29ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ 27 ಜನ ಕೆ.ಎ.ಎಸ್. ಅಧಿಕಾರಿಗಳಿಗೆ ತಹಶೀಲ್ದಾರ್ ವೃಂದದಲ್ಲಿ ಅವರುಗಳ ಹೆಸರಿನ ಮುಂದೆ ತಿಳಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷಗಳ ಸ್ವಯಂಚಾಲಿತ ವಿಶೇಷ ವೇತನ ಬಡ್ತಿಯನ್ನು ಮಂಜೂರು ಮಾಡಲಾಗಿದೆ.

| ಕ್ರ. ಸಂ. | ಅಧಿಕಾರಿಯ ಹೆಸರು | ಕಾಲಮಿತಿ ವೇತನ ಬಡ್ತಿ ಮಂಜೂರಾತಿಯ ದಿನಾಂಕ | ಸ್ವಯಂಚಾಲಿತ ವಿಶೇಷ ವೇತನ ಬಡ್ತಿ ಮಂಜೂರಾತಿಯ ದಿನಾಂಕ |
|---|---|---|---|
| | **ಶ್ರೀಯುತರಾದ:** | | |
| 1) | ಮಹ್ಮದ್ ರಫೀಕ್ ಅಹಮದ್ (ನಿವೃತ್ತ) | 28.07.86 | 28.07.91 |
| 2) | ಎಸ್. ಸೋಮನಾಥ್ (ನಿವೃತ್ತ) | 01.04.82 | - |
| 3) | ಎನ್.ಆರ್. ಸುಬ್ಬರಾವ್ | 13.04.87 | 13.04.92 |
| 4) | ಆರ್.ಎಸ್. ರಾಜಗೋಪಾಲ ರಾವ್ | 03.05.87 | 03.05.92 |
| 5) | ಯು.ಎಸ್. ನಜ್ಜೂರ್ | 13.04.87 | 13.04.92 |
| 6) | ಎ.ಎಲ್. ರಂಗನಾಥ | 17.06.87 | 17.06.92 |
| 7) | ಐ.ಎಂ. ಪ್ರಭಾಕರ್ | 13.04.87 | 13.04.92 |
| 8) | ವಿ. ರಾಮಣ್ಣ | 13.04.87 | 13.04.92 |
| 9) | ಎಂ.ಎಸ್. ಉಮೇಶ್ ಚಂದ್ರ | 03.10.84 | - |
| 10) | ಜೆ. ಅಶ್ವಥ್ (ನಿವೃತ್ತ) | 29.07.86 | 29.07.91 |
| 11) | ಜೆ.ಎಸ್. ವಿರೂಪಾಕ್ಷಯ್ಯ | 10.05.87 | 10.05.92 |
| 12) | ಇ. ರಾಧಾಕೃಷ್ಣ | 13.04.87 | 13.04.92 |
| 13) | ಎಂ.ಎನ್. ವಿಶ್ವನಾಥಯ್ಯ | 18.07.86 | 18.07.91 |
| 14) | ಅರೀಫ್ ಉಲ್ಲಾ ಷರೀಫ್ | 06.07.87 | 06.07.92 |
| 15) | ಹೆಚ್.ಎಸ್. ರತ್ನಾಕರ್ | 20.04.87 | 20.04.92 |
| 16) | ಯು. ಕುನ್ನನ್ನಾ ನಾಯ್ಕ್ | 01.04.82 | - |
| 17) | ಬಿ. ಕೊರಗ ನಾಯ್ಕ್ | 01.04.92 | - |
| 18) | ಎನ್. ಶಾಂತಪ್ಪ | 27.08.88 | 27.08.93 |
| 19) | ಬಿ.ಎಸ್. ಬಿದರಿಮಠ | 20.07.86 | 20.07.91 |
| 20) | ಎಸ್.ಎನ್. ನಾಯ್ಕ್ | 19.07.86 | 19.07.91 |
| 21) | ಸಿ. ಕೃಷ್ಣೇಗೌಡ | 18.07.86 | 19.07.91 |
| 22) | ಕೆ. ಮಲ್ಲಿನಾಥ (ನಿವೃತ್ತ) | 21.07.86 | 21.07.91 |
| 23) | ಬಿ. ಶ್ರೀಧರ್ | 13.04.87 | 15.04.92 |
| 24) | ಜೆ.ಎ. ಅಡಗಟ್ಟಿ | 15.04.87 | 18.04.92 |
| 25) | ಎಂ.ಎಸ್. ಚನ್ನಪ್ಪಗೌಡರ | 25.07.86 | 24.07.91 |
| 26) | ಎಲ್. ರಬೀಂದ್ರ | 20.07.86 | 21.07.91 |
| 27) | ಕೆ. ಪಾರ್ವತಿ ತಿಮ್ಮಯ್ಯ | 10.04.87 | 11.04.92 |

ಈ ಮೇಲಿನ ಅಧಿಕಾರಿಗಳು, ಈ ಹಿಂದೆ ಕಾಲಮಿತಿ ವೇತನ ಬಡ್ತಿ ಹಾಗೂ ಸ್ವಯಂಚಾಲಿತ ವಿಶೇಷ ವೇತನ ಬಡ್ತಿ ಸೌಲಭ್ಯಗಳನ್ನು ಪಡೆದಿದ್ದಲ್ಲಿ ಅದರಿಂದ ಲಭ್ಯವಾದ ಆರ್ಥಿಕ ಸೌಲಭ್ಯವು ಈ ಆದೇಶ ಹೊರಡಿಸಿದ ದಿನಾಂಕದಿಂದ ತಾನಾಗಿಯೇ ರದ್ದಾಗುತ್ತದೆ ಹಾಗೂ ಕೆ.ಎ.ಎಸ್. (ಕಿ.ಶ್ರೇ.) ವೃಂದಕ್ಕೆ ವಾಸ್ತವಿಕವಾಗಿ ಮುಂಬಡ್ತಿ ಪಡೆದ ದಿನಾಂಕದಿಂದ ಅದೇ ವೃಂದಕ್ಕೆ ಬಡ್ತಿಯು ಮುಂದೂಡಲ್ಪಟ್ಟು ನೀಡಲಾದ ಅರ್ಹತಾ ದಿನಾಂಕದವರೆಗೆ ಕೆ.ಎ.ಎಸ್. (ಕಿ.ಶ್ರೇ.) ವೃಂದದಲ್ಲಿ ಪಡೆದಿರುವ ಹೆಚ್ಚುವರಿ ವೇತನವನ್ನು ಕಟಾಯಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಪಿ.ಆರ್. 183 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಕೌಶಲ್ಯ ಯೋಜನೆಯ ಅನುಷ್ಠಾನಕ್ಕಾಗಿ ಕರ್ನಾಟಕ ಪಾರದರ್ಶಕತೆ ನಿಯಮ-10 ರನ್ವಯ ಟೆಂಡರ್ ಸ್ಕ್ರೂಟಿನಿ ಕಮಿಟಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 330 ಪಕವಿ 2003, ದಿನಾಂಕ: 24.11.2003.

2) ಪತ್ರ ಸಂಖ್ಯೆ: 8.1.2004ರ ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ ಇವರಿಂದ.

**ಪ್ರಸ್ತಾವನೆ:**

ಸರ್ಕಾರವು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಕೌಶಲ್ಯ ಯೋಜನೆಯನ್ನು ಜಾರಿಗೊಳಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ: (1) ರಲ್ಲಿನ ಆದೇಶದಲ್ಲಿ ಮಂಜೂರಾತಿಯನ್ನು ನೀಡಿದೆ.

ಹಿಂದುಳಿದ ನಿರುದ್ಯೋಗಿ ಮಹಿಳೆಯರಿಗೆ ವಿವಿಧ ಕೋರ್ಸುಗಳಲ್ಲಿ ಈ ಯೋಜನೆಯನ್ವಯ ಟೆಂಡರ್ ಮೂಲಕ ಕರ್ನಾಟಕ ಪಾರದರ್ಶಕತೆ ಅಧಿನಿಯಮದ ಪ್ರಕಾರ ಕ್ರಮ ಕೈಗೊಳ್ಳಬೇಕಾಗಿದೆ. ಕರ್ನಾಟಕ ಪಾರದರ್ಶಕ ಅಧಿನಿಯಮ 10ರ ಪ್ರಕಾರ ಟೆಂಡರ್ ಅಂಗೀಕರಿಸುವ ಪ್ರಾಧಿಕಾರವು ಒಂದು ಟೆಂಡರ್ ಸ್ಕ್ರೂಟಿನಿ ಸಮಿತಿಯನ್ನು ರಚಿಸುವುದು ಅವಶ್ಯವಾಗಿದೆ. ಟೆಂಡರ್ ಅಂಗೀಕರಿಸುವ ಅಧಿಕಾರವು ಸರ್ಕಾರಕ್ಕೆ ಇರುವ ಕಾರಣ ಅಂತಹ ಸಮಿತಿಯನ್ನು ರಚಿಸಲು ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ ಬೆಂಗಳೂರು ಇವರು ಸರ್ಕಾರವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 25 ಬಿಎಂಎಸ್ 2004, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2004**

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದ, ಕರ್ನಾಟಕ ಪಾರದರ್ಶಕತೆ ಅಧಿನಿಯಮ 1999 ರ ಅಧಿನಿಯಮ 10 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಕೆಳಕಂಡಂತೆ ಟೆಂಡರ್ (ಸ್ಕ್ರೂಟನಿ) ಸಮಿತಿಯನ್ನು ರಚಿಸಿ ಆದೇಶಿಸಿದೆ.

| | | |
|---|---|---|
| 1. | ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು | ಅಧ್ಯಕ್ಷರು |
| 2. | ಉಪಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು | ಸದಸ್ಯರು |
| 3. | ಮುಖ್ಯಲೆಕ್ಕಾಧಿಕಾರಿಗಳು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು | ಸದಸ್ಯರು |
| 4. | ಕಾರ್ಯದರ್ಶಿಗಳು, ಇ. ಗೌರ್ನನ್ಸ್, ಸಿ.ಆ.ಸು.ಇ., ಬೆಂಗಳೂರು | ಸದಸ್ಯರು |
| 5. | ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಆಯುಕ್ತರ ಪ್ರತಿನಿಧಿಗಳು | ಸದಸ್ಯರು |
| 6. | ಉದ್ಯೋಗ ಮತ್ತು ತರಬೇತಿ ಇಲಾಖಾ ನಿರ್ದೇಶಕರ, ಪ್ರತಿನಿಧಿಗಳು | ಸದಸ್ಯರು |
| 7. | ಜಂಟಿ ನಿರ್ದೇಶಕರು (ವಸತಿ ನಿಲಯ) ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು. | ಸದಸ್ಯ ಕಾರ್ಯದರ್ಶಿಗಳು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪ್ರಾಣದೇವ**

ಪಿ.ಆರ್. 185 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಉಪ ಕಾರ್ಯದರ್ಶಿ ಹಾಗೂ ನಿಯೋಜನೆ ಮೇಲೆ ಬೆಂಗಳೂರಿನ ಶ್ರೀ ಜಯದೇವ ಹೃದ್ರೋಗ ಸಂಸ್ಥೆಯಲ್ಲಿ ಮುಖ್ಯ ಆಡಳಿತಾಧಿಕಾರಿ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವ ಶ್ರೀ ಎಂ.ಜೆ.ಕೌಜಲಗಿ ರವರ ನಿಯೋಜನಾ ಷರತ್ತು ಮತ್ತು ನಿಬಂಧನೆಗಳು.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆಃ ಸಿಆಸುಇ 64 ಆಸೇವ 2003, ದಿನಾಂಕಃ 18.6.2003.

2. ಮುಖ್ಯ ಆಡಳಿತಾಧಿಕಾರಿ, ಶ್ರೀ ಜಯದೇವ ಹೃದ್ರೋಗ ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಸ್‌ಜೆಐಸಿ/ಸಿಎಒ/ಆ.ವಿ/2003-04, ದಿನಾಂಕ: 5.11.2003.

**ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 364 ಸಅಸೇ 2003, ಬೆಂಗಳೂರು, ದಿನಾಂಕಃ 4ನೇ ಫೆಬ್ರವರಿ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಸರ್ಕಾರದ ಉಪ ಕಾರ್ಯದರ್ಶಿ ಹಾಗೂ ನಿಯೋಜನೆ ಮೇಲೆ ಬೆಂಗಳೂರಿನ ಶ್ರೀ ಜಯದೇವ ಹೃದ್ರೋಗ ಸಂಸ್ಥೆಯಲ್ಲಿ ಮುಖ್ಯ ಆಡಳಿತಾಧಿಕಾರಿ ಹುದ್ದೆಯಲ್ಲಿ (ಇಲ್ಲಿ ಇನ್ನು ಮುಂದೆ ನಿಯೋಜಕ ಎಂದು ಉಲ್ಲೇಖಿಸಲಾಗುವುದು) ಸೇವೆ ಸಲ್ಲಿಸುತ್ತಿರುವ ಶ್ರೀ ಎಂ.ಜೆ.ಕೌಜಲಗಿ ರವರ (ಇಲ್ಲಿ ಇನ್ನು ಮುಂದೆ ಅಧಿಕಾರಿ ಎಂದು ಉಲ್ಲೇಖಿಸಲಾಗುವುದು) ನಿಯೋಜನೆ ಷರತ್ತು ನಿಬಂಧನೆಗಳನ್ನು ಈ ಕೆಳಕಂಡಂತೆ ನಿಗಧಿಪಡಿಸಲಾಗಿದೆ.

1. **ನಿಯೋಜನೆಯ ಅವಧಿ:-** ಅನ್ಯ ಸೇವೆಯ ಮೇಲಿನ ನಿಯೋಜನೆಯ ಪ್ರಾರಂಭಿಕ ಅವಧಿಯು ದಿನಾಂಕಃ 25.6.2003 ರಿಂದ ಮೂರು ವರ್ಷ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

2. **ಅನ್ಯ ಸೇವೆಯ ಮೇಲಿನ ನಿಯೋಜನೆಯ ಪ್ರಾರಂಭ ಮತ್ತು ಮುಕ್ತಾಯದ ಅವಧಿ:-** ಅನ್ಯ ಸೇವೆಯ ಮೇಲಿನ ನಿಯೋಜನೆಯ ಅವಧಿಯು ಅಧಿಕಾರಿಯವರು ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಪ್ರಾರಂಭವಾಗುವುದು; ಮತ್ತು ನಿಯೋಜನಾವಧಿ ಅಂತ್ಯಗೊಂಡು ನೇಮಕ ಮಾಡಿದ ಹುದ್ದೆಯ ಕಾರ್ಯಭಾರ ವಹಿಸಿಕೊಟ್ಟ ದಿನಾಂಕದಿಂದ ಮುಕ್ತಾಯಗೊಳ್ಳುವುದು.

3. ವೇತನಃ- ಅನ್ಯ ಸೇವೆಯ ಮೇಲಿನ ನಿಯೋಜನೆಯ ಅವಧಿಯಲ್ಲಿ ಅವರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ವೇತನವನ್ನು ಪಡೆಯುತ್ತಾರೆ ಮತ್ತು 200.00 ರೂಗಳ ಗರಿಷ್ಠ ಮಿತಿಗೊಳಪಟ್ಟು ಆ ವೇತನ ಶ್ರೇಣಿಯ ಸರಾಸರಿ ಶೇಕಡ 5ರ ದರದಲ್ಲಿ ಅನ್ಯ ಸೇವಾ ಭತ್ಯೆಯನ್ನು (ಎಫ್.ಎಸ್.ಎ) ಸಹ ಪಡೆಯುತ್ತಾರೆ.

4. ತುಟ್ಟಿಭತ್ಯೆಃ ಮನೆ ಬಾಡಿಗೆ ಭತ್ಯೆಃ ನಗರ ಪರಿಹಾರ ಭತ್ಯೆಃ ತುಟ್ಟಿಭತ್ಯೆ ಃ ಮನೆ ಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಯ ಪಾವತಿಯು ರಾಜ್ಯ ಸರ್ಕಾರದ ನಿಯಮಗಳ ಅಡಿಯಲ್ಲಿ ನಿಬಂಧಿಸಲಾಗುವುದು.

5. ಸೇರುವ ಕಾಲ, ಸೇರುವ ಕಾಲದ ವೇತನ ಮತ್ತು ವರ್ಗಾವಣೆ ಪ್ರಯಾಣ ಭತ್ಯೆಃ ಇವುಗಳನ್ನು ನಿಯೋಜನೆ ಮೇಲೆ ಹೋಗುವಾಗ ಮತ್ತು ಅಲ್ಲಿಂದ ಹಿಂದಿರುಗುವಾಗ ರಾಜ್ಯ ಸರ್ಕಾರ ನಿಯಮಗಳ ಃ ಆದೇಶಗಳಡಿಯಲ್ಲಿ ಕ್ರಮಗೊಳಿಸಲಾಗುವುದು ಮತ್ತು ಇವುಗಳನ್ನು ನಿಯೋಜಕರು ಪಾವತಿ ಮಾಡತಕ್ಕದ್ದು.

6. ಪ್ರಯಾಣ ಭತ್ಯೆಃ– ನಿಯೋಜನೆ ಮೇಲೆ ಅನ್ಯ ಸೇವೆಗೆ ಸೇರಿದ ನಂತರ ಕೈಗೊಂಡ ಪ್ರಯಾಣಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನಿಯೋಜಕರಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಪಡೆಯಲು ಅಧಿಕಾರಿ ಅರ್ಹರಾಗಿರುತ್ತಾರೆ.

7. ರಜೆ ನಿಯಮಗಳುಃ– ರಾಜ್ಯ ಸರ್ಕಾರದಲ್ಲಿ ಅಧಿಕಾರಿಗೆ ಅನ್ವಯವಾಗುವ ರಜೆ ನಿಯಮಗಳಿಗೆ ಒಳಪಟ್ಟಿರುತ್ತಾರೆ.

8. ರಜೆ ಪ್ರಯಾಣ ರಿಯಾಯಿತಿಃ– ರಾಜ್ಯ ಸರ್ಕಾರದಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಸ್ವಗ್ರಾಮ ಪ್ರಯಾಣಕ್ಕೆ ರಜೆ ಪ್ರಯಾಣ ರಿಯಾಯಿತಿಯನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ.

9. ಗಳಿಕೆ ರಜೆ ನಗದೀಕರಣಃ ಕರ್ನಾಟಕ ನಾಗರೀಕ ಸೇವಾ ನಿಯಮಗಳ ^ಸಿ^ ಅನುಬಂಧದಲ್ಲಿರುವ ನಿಯಮಗಳ ಪ್ರಕಾರ ಗಳಿಕೆ ರಜೆ ನಗದೀಕರಣ ಸೌಲಭ್ಯಕ್ಕೆ ಅಧಿಕಾರಿ ಅರ್ಹರಾಗಿರುತ್ತಾರೆ.

10. ವೈದ್ಯಕೀಯ ರಿಯಾಯಿತಿಗಳುಃ– 1963ರ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಉಪಚಾರ) ನಿಯಮಗಳಲ್ಲಿ ಲಭ್ಯವಿರುವ ವೈದ್ಯಕೀಯ ಸೌಲಭ್ಯಗಳಿಗೆ ಕಡಿಮೆಯಿಲ್ಲದಂತೆ ಸೌಲಭ್ಯಗಳನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ ಮತ್ತು ಅದರ ಬಾಬ್ತಿನ ವೆಚ್ಚವನ್ನು ನಿಯೋಜಕರೇ ಭರಿಸತಕ್ಕದ್ದು.

11. ದುರ್ಬಲತೆ ರಜೆಃ ನಿಯೋಜಕರ ಬಳಿ ಸೇವೆಯಲ್ಲಿರುವಾಗ ಮತ್ತುಃಅಥವಾ ಸೇವೆಯ ಮೂಲಕ ಸಂಭವಿಸುವ ದುರ್ಬಲತೆಗೆ ಸಂಬಂಧಿಸಿದಂತೆ ಮಂಜೂರಾದ ದುರ್ಬಲತೆ ರಜೆಗೆ ಇಂತಹ ದುರ್ಬಲತೆಯು ನಿಯೋಜಕರ ಬಳಿಯಲ್ಲಿನ ಸೇವೆಯು ಕೊನೆಗೊಂಡ ನಂತರ ಕಂಡು ಬಂದರೂ ಸಂಬಂಧಿಸಿದ ರಜೆ ವೇತನವನ್ನು ಪಾವತಿ ಮಾಡಲು ಅನ್ಯ ನಿಯೋಜಕರು ಬದ್ಧರಾಗಿರುತ್ತಾರೆ.

12. ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಃ– (ಅ) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ನಿಯೋಜಕರು ಈ ಮುಂದಿನ ದರಗಳಲ್ಲಿ ಪಾವತಿ ಮಾಡತಕ್ಕದ್ದು.

| | |
|---|---|
| ರಜೆ ವೇತನ ಅಂಶದಾನ | ಅನ್ಯ ಸೇವೆಯ ಅವಧಿಯಲ್ಲಿ ಅನ್ಯ ಸೇವಾ ಭತ್ಯೆಯೂ ಸೇರಿದಂತೆ ಪಡೆಯುವ ಸಂಬಳದ ಶೇ.11 ರಷ್ಟು |
| ನಿವೃತ್ತಿ ವೇತನ ಅಂಶದಾನ | ಕಾಲಕಾಲಕ್ಕೆ ಪಡೆಯುವ ವೇತನದ ಎಂಟನೇ ಒಂದು ಭಾಗ ಈ ಉದ್ದೇಶಕ್ಕೆ 'ವೇತನ' ಎಂದರೆ ಸರ್ಕಾರಿ ಆದೇಶ ಸಂಖ್ಯೆಃಎಫ್‌ಡಿ 37 ಎಸ್‌ಆರ್‌ಎಸ್ 87 ದಿನಾಂಕಃ 11.2.1988 ರಲ್ಲಿ ವಿವರಿಸಲಾದ ವೇತನ ಎಂದು ಅರ್ಥ. |

(ಆ) ನಿಯೋಜಕರು ವಾರ್ಷಿಕವಾಗಿ ಪ್ರತಿ ಆರ್ಥಿಕ ವರ್ಷ ಕೊನೆಗೊಂಡ 15 ದಿನಗಳೊಳಗೆ ಅಥವಾ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನವೇ ಅನ್ಯ ಸೇವೆಯು ಮುಗಿದು ಹೋದಂದಿನಿಂದ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ಪಾವತಿ ಮಾಡತಕ್ಕದ್ದು. ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪ್ರತ್ಯೇಕವಾಗಿ ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಸಂದಾಯ ಮಾಡತಕ್ಕದ್ದು.

| | | |
|---|---|---|
| (ಅ) ರಜೆ ವೇತನ ಅಂಶದಾನ | (1) ಅಖಿಲ ಭಾರತ ಸೇವೆಯ ಅಧಿಕಾರಿಗಳ ಪ್ರಕರಣದಲ್ಲಿ | 0070 ಇತರೆ ಆಡಳಿತ ಸೇವೆಗಳು–60, ಇತರೆ ಸೇವೆಗಳು–800 ಇತರೆ ಜಮೆಗಳು 13 ಅಖಿಲ ಭಾರತ ಸೇವೆಯ ಅಧಿಕಾರಿಗಳಿಗೆ ಸಂಬಂಧಿಸಿದ ರಜೆ ವೇತನ ಅಂಶದಾನ |
| | (2)ಇತರ ಪ್ರಕರಣದಲ್ಲಿ | |
| | (ಎ) ಕೃತ್ಯ ಸಂಬಂಧದ ಜಮೆ ಶೀರ್ಷಿಕೆ ಇದ್ದಲ್ಲಿ<br>(ಬಿ) ಸರಿಹೊಂದುವ ಜಮೆ ಶೀರ್ಷಿಕೆ ಇಲ್ಲದೆ ಹೋದಲ್ಲಿ | ಸಿಬ್ಬಂದಿಗೆ ಅನ್ವಯಿಸುವ ವೆಚ್ಚ ಶೀರ್ಷಿಕೆಗೆ ಅನುಗುಣವಾದ ಕೃತ್ಯ ಸಂಬಂಧದ ಜಮೆ ಶೀರ್ಷಿಕೆ 800 – ಇತರೆ ಜಮೆಗಳು – ರಜೆ ವೇತನದ ಅಂಶದಾನ. |
| | "ಸಾಮಾನ್ಯ ಸೇವೆಗಳು | 0075. ಇತರೆ ಸಾಮಾನ್ಯ ಸೇವೆಗಳು – 800. |
| | ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ. | ಇತರೆ ಜಮೆಗಳು– ರಜೆ ವೇತನ ಅಂಶದಾನ. |
| | ಸಾಮಾಜಿಕ ಮತ್ತು ಸಾಮೂದಾಯಿಕ ಸೇವೆಗಳು ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ. | 0250. ಇತರೆ ಸಾಮಾಜಿಕ ಸೇವೆಗಳು – 800. ಇತರೆ ಜಮೆಗಳು – ರಜೆ ವೇತನ ಅಂಶದಾನ. |
| | ಆರ್ಥಿಕ ಸೇವೆಗಳು ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 1475 ಇತರೆ ಸಾಮಾನ್ಯ ಆರ್ಥಿಕ ಸೇವೆಗಳು – 800. ಇತರೆ ಜಮೆಗಳು – ರಜೆ ವೇತನ ಅಂಶದಾನ. |

| | |
|---|---|
| (ಆ) ನಿವೃತ್ತಿ ವೇತನ ಅಂಶದಾನ | 0071. ನಿವೃತ್ತಿ ವೇತನ ಮತ್ತು ಇತರೆ ನಿವೃತ್ತಿ ಸೌಲಭ್ಯಗಳ ಬಗ್ಗೆ ಅಂಶದಾನ ಮತ್ತು ವಸೂಲಿಗಳು–101. ಚಂದಾಗಳು ಮತ್ತು ಅಂಶದಾನಗಳು–03. ನಿವೃತ್ತಿ ವೇತನ ವೆಚ್ಚದ ಬಗ್ಗೆ ವಾಣಿಜ್ಯ ಇಲಾಖೆಗಳಿಂದ ವಸೂಲು ಮಾಡಲಾದ ಅಂಶದಾನ ಅಥವಾ 06. ನಿವೃತ್ತಿ ವೇತನದ ವೆಚ್ಚದ ಸಲುವಾಗಿ ಸ್ಥಳೀಯ ಸಂಸ್ಥೆಗಳಿಂದ ವಸೂಲು ಮಾಡಿದ ಅಂಶದಾನ. |

(ಇ) ಮೇಲಿನ ಅವಧಿಯೊಳಗೆ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪಾವತಿ ಮಾಡದಿದ್ದರೆ, ಸರ್ಕಾರ ವಿಶೇಷವಾಗಿ ವಿನಾಯಿತಿ ತೋರಿಸಿದ ಹೊರತು, ಪಾವತಿ ಮಾಡದಿರುವ ಅಂಶದಾನದ ಮೇಲೆ, ಮೇಲಿನ ಅವಧಿಯು ಮುಕ್ತಾಯಗೊಂಡ ದಿನಾಂಕದಿಂದ ಅಂಶದಾನವನ್ನು ಅಂತಿಮವಾಗಿ ಪಾವತಿಮಾಡುವ ದಿನಾಂಕದವರೆಗೆ ಪ್ರತಿ 100 ರೂಗಳಿಗೆ ದಿನಂಪ್ರತಿ 2 ಪೈಸೆ ದರದಲ್ಲಿ ಬಡ್ಡಿಯನ್ನು ನಿಯೋಜಕರು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

(13) ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಃ ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಗೆ ಸಂಬಂಧಿಸಿದ ಮಾಸಿಕ ವಂತಿಗೆಯನ್ನು ಅಧಿಕಾರಿಯವರ ವೇತನದಿಂದ ವಸೂಲು ಮಾಡಲು ಮತ್ತು ಅದನ್ನು 1981ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಯ ಅನುಬಂಧ 'ಎ' ದಲ್ಲಿನ ಅನುಸೂಚಿಯೊಂದಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ–2) ಇವರ ಹೆಸರಿಗೆ ಕ್ರಾಸ್ ಮಾಡಿದ ಚೆಕ್ : ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಸಂಬಂಧಿತ ಲೆಕ್ಕ ಶೀರ್ಷಿಕೆಗೆ ಜಮೆ ಮಾಡಲು ಕಳುಹಿಸಿಕೊಡತಕ್ಕದ್ದು.

(14) ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ವಿಮಾ ಪತ್ರ : ಸಾಮಾನ್ಯ ಭವಿಷ್ಯ ನಿಧಿಗೆ ಚಂದಾ : ಅನ್ಯ ಸೇವೆಯ ಮೇಲೆ ಪ್ರತಿ ನಿಯೋಜನೆ ಹೋಗುವ ಸಮಯದಲ್ಲಿ ಕೆ.ಜಿ.ಐ.ಡಿ. ನಿಯಮಾವಳಿ:ಜಿ.ಪಿ.ಎಫ್. ನಿಯಮಾವಳಿ ಪ್ರಕಾರ ಚಂದಾ ನೀಡುತ್ತಿದ್ದ ಕೆ.ಜಿ.ಐ.ಡಿ.:ಜಿ.ಪಿ.ಎಫ್.ನಲ್ಲಿನ ವಿಮಾ ಪತ್ರಗಳಿಗೆ ಚಂದಾ ನೀಡುವುದನ್ನು ಅಧಿಕಾರಿ ಮುಂದುವರೆಸುತ್ತಾರೆ. ಅಧಿಕಾರಿಯವರ ಸಂಬಳದಿಂದ ಚಂದಾಗಳನ್ನು ವಸೂಲು ಮಾಡತಕ್ಕದ್ದು ಮತ್ತು ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಜಮಾ ಮಾಡತಕ್ಕದ್ದು.

| | |
|---|---|
| ಸಾಮಾನ್ಯ ಭವಿಷ್ಯ ನಿಧಿ | 8005. ರಾಜ್ಯ ಭವಿಷ್ಯ ನಿಧಿ |
| ಕರ್ನಾಟಕ ಸರ್ಕಾರಿ ವಿಮಾ ಇಲಾಖೆ | 8011. ವಿಮೆ ಮತ್ತು ನಿವೃತ್ತಿ ವೇತನ ನಿಧಿಗಳು–1 ಜಮೆ ನಿಧಿಗಳು |

(15) ಬೋನಸ್ ಅಥವಾ ಅನುಗ್ರಹ ಕೊಡುಗೆ ಪಾವತಿಃ– ಸರ್ಕಾರಿ ಕಂಪೆನಿ, ಮಂಡಳಿ, ನಿಗಮ ಇತ್ಯಾದಿಗಳಿಗೆ ನಿಯೋಜಕರಾಗಿ ಮಾಸಿಕ ಎರಡು ಸಾವಿರದ ಐದು ನೂರು ರೂಪಾಯಿಗಳಿಗೆ ಮೀರದೆ ಸಂಬಳವನ್ನು ಪಡೆಯುತ್ತಿರುವ ಅಧಿಕಾರಿಗೆ ಉದ್ದಿಮೆಯು 1965ರ ಬೋನಸ್ ಸಂದಾಯ ಅಧಿನಿಯಮಗಳ ಪ್ರಕಾರ ಅನುಗ್ರಹ ಕೊಡುಗೆ ನೀಡಿದಲ್ಲಿ ಬೋನಸ್ ಅಥವಾ ಅನುಗ್ರಹ ಕೊಡುಗೆಯನ್ನು ಪಡೆಯಲು ಅನುಮತಿಸತಕ್ಕದ್ದು.

(16) ಬಡ್ತಿ ಅಥವಾ ವರ್ಗಾವಣೆ ಅಥವಾ ಪ್ರಭಾರಃ– ಅಧಿಕಾರಿಯವರಿಗೆ ಬಡ್ತಿ ನೀಡುವುದು ಅಥವಾ ವರ್ಗಾವಣೆ ಮಾಡುವುದು ಅಥವಾ ಹೆಚ್ಚುವರಿ ಕಾರ್ಯಭಾರವನ್ನು ವಹಿಸುವುದು ಅಥವಾ ಹೆಚ್ಚುವರಿ ಸಂಭಾವನೆಯನ್ನು ನೀಡುವುದು ಅಥವಾ ಸೌಲಭ್ಯಗಳನ್ನು ಒದಗಿಸುವುದು ಇವುಗಳನ್ನು ಸರ್ಕಾರದ ಪೂರ್ವಾನುಮತಿ ಪಡೆಯದೆ ಮಾಡತಕ್ಕದ್ದಲ್ಲ;

(17) ಗೃಹ ನಿರ್ಮಾಣ ಮುಂಗಡ : ಗೃಹ ಖರೀದಿ ಮುಂಗಡ ಃ ಗೃಹ ರಿಪೇರಿ ಮುಂಗಡ ಮತ್ತು ವಾಹನ ಖರೀದಿ ಮುಂಗಡ:– ನಿಯೋಜಕರು ಪ್ರಸ್ತುತ ಮುಂಗಡಗಳನ್ನು ಅಧಿಕಾರಿಯವರಿಗೆ ಮಂಜೂರು ಮಾಡತಕ್ಕದ್ದಲ್ಲ ಈ ಮುಂಗಡಗಳ ಮಂಜೂರಾತಿಗಾಗಿ ಅಧಿಕಾರಿಯವರು ಆಡಳಿತಾತ್ಮಕ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಅರ್ಜಿ ಸಲ್ಲಿಸತಕ್ಕದ್ದು.

ದಿನಾಂಕಃ 11.7.1996 ಸಂಖ್ಯೆಃ ಎಫ್‌ಡಿ 1 ಟಿಎಫ್‌ಪಿ 96ರ ಸರ್ಕಾರಿ ಆದೇಶದನ್ವಯ ಆರ್ಥಿಕ ಸಹಮತಿಯನ್ನು ಪರಿಭಾವಿಸಿ ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ.ಪ್ರಭು**

ಪಿ.ಆರ್. 186

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ದಿನಾಂಕ: 27.4.1978 ಕ್ಕಿಂತ ಪೂರ್ವದಲ್ಲಿ ಆದ ಅರಣ್ಯ ಭೂಮಿಯ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಕೇಂದ್ರ ಸರ್ಕಾರದ ದಿನಾಂಕ: 15.5.1996ರ ಪತ್ರ ಸಂಖ್ಯೆ: 8-50/95 ಎಫ್‌ಸಿ.

2) ದಿನಾಂಕ: 5.5.1997ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಇಇ 5 ಎಫ್‌ಜಿಎಲ್ 90.

**ಪ್ರಸ್ತಾವನೆ:**

ದಿನಾಂಕ: 27.4.1978ರ ಪೂರ್ವದಲ್ಲಿ ಆಗಿರುವ ಅರಣ್ಯ ಒತ್ತುವರಿಗಳನ್ನು ಸಕ್ರಮಗೊಳಿಸುವ ವಿಷಯವು ಸರ್ಕಾರದ ಪರಿಶೀಲನೆಯಲ್ಲಿದ್ದು ಕೇಂದ್ರ ಸರ್ಕಾರವು ಮೇಲೆ 1 ರಲ್ಲಿ ಓದಲಾದ ದಿನಾಂಕ: 15.5.1996ರ ಪತ್ರದಲ್ಲಿ ಅರಣ್ಯ (ಸಂರಕ್ಷಣಾ) ಕಾಯ್ದೆ

1980ರ ಸೆಕ್ಷನ್ 2 ರಡಿಯಲ್ಲಿ ದಿನಾಂಕ: 27.4.1978ರ ಪೂರ್ವದಲ್ಲಿ ಆಗಿರುವ 19,348 ಒತ್ತುವರಿ ಪ್ರಕರಣಗಳಲ್ಲಿ 14,848.83 ಹೆ. ಅರಣ್ಯ ಭೂಮಿಯನ್ನು ಸಕ್ರಮಗೊಳಿಸಲು ಅನುಮೋದನೆ ನೀಡಿತ್ತು. ಇದರನ್ವಯ ಮೇಲೆ (2) ರಲ್ಲಿ ಓದಲಾದ ದಿನಾಂಕ: 5.5.1997ರ ಆದೇಶದಲ್ಲಿ 19,348 ಒತ್ತುವರಿ ಪ್ರಕರಣಗಳಲ್ಲಿ 14,848.83 ಹೆ. ಅರಣ್ಯ ಭೂಮಿಯನ್ನು ಸಕ್ರಮಗೊಳಿಸಲು ಆದೇಶಿಸಲಾಯಿತು. ಈ ಆದೇಶದಲ್ಲಿ ಸಕ್ರಮಗೊಳಿಸಲು ಕೆಲವು ಷರತ್ತುಗಳನ್ನು ನಿಗದಿಪಡಿಸಿ ಈ ಷರತ್ತುಗಳ ಪಾಲನೆಯಾಗಿರುವ ಪ್ರಕರಣಗಳಲ್ಲಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು 'ಪಟ್ಟಾ' ನೀಡುವಂತೆ ಸೂಚಿಸಲಾಯಿತು.

ಈ ಆದೇಶದನ್ವಯ ದಿನಾಂಕ: 31.3.2003 ರಂದು ಇರುವಂತೆ ಕೇಂದ್ರ ಸರ್ಕಾರ ಅನುಮೋದಿಸಿದ 27.4.1978ರ ಪೂರ್ವದಲ್ಲಿ ಒತ್ತುವರಿಯಾಗಿರುವ 14,848.83 ಹೆ. ಅರಣ್ಯ ಭೂಮಿಯಲ್ಲಿ, 5,140 ಕುಟುಂಬಗಳು / ವ್ಯಕ್ತಿಗಳು ಒತ್ತುವರಿ ಮಾಡಿರುವ 3073 ಹೆ. ಅರಣ್ಯ ಭೂಮಿಯನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಸಕ್ರಮಗೊಳಿಸಿರುತ್ತಾರೆ.

ಈ ದಿಕ್ಕಿನಲ್ಲಿ ಕೇಂದ್ರ ಸರ್ಕಾರವು ಅನುಮೋದಿಸಿರುವ 27.4.1978ರ ಪೂರ್ವದಲ್ಲಿ ಆಗಿರುವ ಅರಣ್ಯ ಭೂಮಿಯ ಒತ್ತುವರಿಗಳನ್ನು ಸಕ್ರಮಗೊಳಿಸುವ ಬಗ್ಗೆ ಆಗಿರುವ ಪ್ರಗತಿಯನ್ನು ಸರ್ಕಾರವು ಪುನರ್ ಪರಿಶೀಲಿಸಿದೆ. ಈ ಒತ್ತುವರಿಗಳನ್ನು ಸಕ್ರಮಗೊಳಿಸಿ ಮಾಲೀಕತ್ವದ ಹಕ್ಕನ್ನು ನೀಡಲು ಸಾಕಷ್ಟು ವಿಳಂಬವಾಗಿರುವುದು ಸಹ ಕಂಡು ಬಂದಿದೆ. ಕೇಂದ್ರ ಸರ್ಕಾರದಿಂದ ಸಕ್ರಮಗೊಳಿಸಲು ಅನುಮೋದನೆಯಾಗಿರುವ ಅರಣ್ಯ ಭೂಮಿಯನ್ನು ಕಂದಾಯ ಇಲಾಖೆಯ ವಶಕ್ಕೆ ಅರಣ್ಯ ಇಲಾಖೆಯು ನೀಡಿದಲ್ಲಿ, ಕಂದಾಯ ಇಲಾಖೆಯು ಭೂಮಂಜೂರಾತಿ ನಿಯಮಗಳಡಿಯಲ್ಲಿ ಹಾಗೂ ಕೇಂದ್ರ ಸರ್ಕಾರವು ಮೇಲೆ (1) ರಲ್ಲಿ ಓದಲಾದ ದಿನಾಂಕ: 15.5.1996ರ ಪತ್ರದಲ್ಲಿ ವಿಧಿಸಿರುವ ಷರತ್ತುಗಳಿಗನುಸಾರ ಅರಣ್ಯ ಭೂಮಿಯನ್ನು ಸಂಬಂಧಪಟ್ಟ ಕುಟುಂಬಗಳಿಗೆ ಹಂಚಿಕೆ ಮಾಡಲು ಅನುಕೂಲವಾಗುತ್ತದೆ ಎಂದು ಅಭಿಪ್ರಾಯ ಪಡಲಾಗಿದೆ. ಇದನ್ನು ಗಮನದಲ್ಲಿರಿಸಿ ದಿನಾಂಕ: 5.5.1997ರ ಸರ್ಕಾರಿ ಆದೇಶವನ್ನು ಸೂಕ್ತ ರೀತಿಯಲ್ಲಿ ಪರಿಷ್ಕರಿಸಲು ಉದ್ದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 21 ಎಫ್‌ಜಿಎಲ್ 2004, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2004**

ದಿನಾಂಕ: 5.5.1997ರ ಸರ್ಕಾರಿ ಆದೇಶ ಎಫ್‌ಇಇ 5 ಎಫ್‌ಜಿಎಲ್ 90ನ್ನು ಮಾರ್ಪಡಿಸುತ್ತಾ ದಿನಾಂಕ: 15.5.1996ರ ಕೇಂದ್ರ ಸರ್ಕಾರದ ಪತ್ರದಲ್ಲಿ ಅನುಮೋದನೆ ನೀಡಿರುವ 1978ರ ಪೂರ್ವದಲ್ಲಿ ಆದ ಅರಣ್ಯ ಭೂಮಿಯ ಒತ್ತುವರಿಯನ್ನು ಸಕ್ರಮಗೊಳಿಸುವ ಬಗ್ಗೆ ಕೆಳಕಂಡ ವಿಧಾನವನ್ನು ಅನುಸರಿಸುವಂತೆ ಆದೇಶಿಸಿದೆ.

ಅ) ಅರಣ್ಯ ಇಲಾಖೆಯು (ಅರಣ್ಯ ಮಧ್ಯದಲ್ಲಿರುವ ಪ್ರದೇಶವನ್ನು ಹೊರತುಪಡಿಸಿ) ಒತ್ತುವರಿಯಾಗಿರುವ ಅರಣ್ಯ ಪ್ರದೇಶವನ್ನು ಗುರುತಿಸಬೇಕು.

ಆ) ಈ ರೀತಿ ಗುರುತಿಸಿದ ಅರಣ್ಯ ಪ್ರದೇಶವನ್ನು ನಿಯಮಾನುಸಾರ ಡಿನೋಟಿಫೈ ಮಾಡಿ ಕಂದಾಯ ಇಲಾಖೆಯ ವಶಕ್ಕೆ ನೀಡುವುದು.

ಇ) ಕಂದಾಯ ಇಲಾಖೆಯ ವಶಕ್ಕೆ ನೀಡಲಾದ ಈ ಭೂಮಿಯನ್ನು ಕಂದಾಯ ಇಲಾಖೆಯು ದಿನಾಂಕ: 15.5.1996ರ ಕೇಂದ್ರ ಸರ್ಕಾರದ ಪತ್ರದಲ್ಲಿ ವಿಧಿಸಿರುವ ಷರತ್ತುಗಳನ್ವಯ ಹಾಗೂ ಭೂ ಮಂಜೂರಾತಿ ನಿಯಮಗಳನ್ವಯ ಅರ್ಹತೆ ಇರುವ ಕುಟುಂಬಗಳಿಗೆ : ವ್ಯಕ್ತಿಗಳಿಗೆ ಹಂಚಿಕೆ ಮಾಡಬೇಕು.

ಈ) ಈಗಾಗಲೇ ದಿನಾಂಕ: 5.5.1997ರ ಆದೇಶದನ್ವಯ ಕಂದಾಯ ಇಲಾಖೆಯು ಕೆಲವು ಪ್ರಕರಣಗಳಲ್ಲಿ ಒತ್ತುವರಿದಾರರಿಗೆ ಮಾಲೀಕತ್ವದ ಹಕ್ಕನ್ನು ನೀಡಿದ್ದಲ್ಲಿ ಅಂತಹ ಪ್ರಕರಣಗಳಲ್ಲಿ, ಅರಣ್ಯ ಇಲಾಖೆಯಿಂದ ಅರಣ್ಯ ಭೂಮಿಯನ್ನು ಡಿನೋಟಿಫೈ ಮಾಡಿದರೆ ಸಾಕು. ಕಂದಾಯ ಇಲಾಖೆಯಿಂದ ಪುನಃ ಭೂಮಂಜೂರಾತಿ ಮಾಡುವ ಅವಶ್ಯಕತೆ ಇರುವುದಿಲ್ಲ.

ಉ) ಮೇಲೆ ಸೂಚಿಸಿರುವ ಕ್ರಮವನ್ನು ಸಂಪೂರ್ಣಗೊಳಿಸಿದ ನಂತರ ಭೂ ಮಂಜೂರಾತಿ ಆಗದೇ ಉಳಿದ ಭೂಮಿಯನ್ನು ಕಂದಾಯ ಇಲಾಖೆಯು ಅರಣ್ಯ ಇಲಾಖೆಗೆ ಪುನಃ ಹಸ್ತಾಂತರಿಸತಕ್ಕದ್ದು.

ಮೇಲೆ ಸೂಚಿಸಿರುವ ಅಂಶಗಳನ್ನು ಹೊರತುಪಡಿಸಿ ದಿನಾಂಕ: 5.5.1997ರ ಆದೇಶದಲ್ಲಿ ನೀಡಿರುವ ಸೂಚನೆಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ವತ್ಸಲ**

ಪಿ.ಆರ್. 190 ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ವಿಷಯ:** ದಿನಾಂಕ: 24.10.1980 ಕ್ಕಿಂತ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ರಚಿಸಿರುವ ತಾಲ್ಲೂಕು ಮಟ್ಟದ ಸಮಿತಿಗಳಿಗೆ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಅಪಜೀ 361 ಎಫ್‌ಜಿಎಲ್ 2002 (ಭಾಗ), ದಿನಾಂಕ: 1.12.2003.

2) ಮುಖ್ಯ ಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ: ಮುಮ:ಆಕಾ:658/04,697/04 ಮತ್ತು 698/04, ದಿನಾಂಕ: 6.2.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 24.10.1980ರ ಪೂರ್ವದ ಅರಣ್ಯ ಭೂಮಿಯ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ಪ್ರತಿ ತಾಲ್ಲೂಕಿಗೆ ಒಂದರಂತೆ ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸಲಾಗಿದೆ. ಈ ತಾಲ್ಲೂಕು

ಮಟ್ಟದ ಸಮಿತಿಗಳಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮ ನಿರ್ದೇಶನ ಮಾಡಲು 8 ತಾಲ್ಲೂಕು ಮಟ್ಟದ ಸಮಿತಿಗೆ ಹೆಸರುಗಳನ್ನು ಮೇಲೆ ಓದಲಾದ ಉಲ್ಲೇಖ (2)ರ ಟಿಪ್ಪಣಿಯಲ್ಲಿ ಸೂಚಿಸಲಾಗಿದೆ.

ಅದರಂತೆ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನವನ್ನು ಮಾಡಲು ಉದ್ದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 37 ಎಫ್‌ಜಿಎಲ್ 2004, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2004**

ದಿನಾಂಕ: 1.12.2003 ರಲ್ಲಿ ರಚಿಸಲಾದ ತಾಲ್ಲೂಕು ಮಟ್ಟದ ಸಮಿತಿಗಳಲ್ಲಿ ಕೆಳಕಂಡ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಕೆಳಕಂಡ ಅಧ್ಯಕ್ಷರು ಮತ್ತು ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮ ನಿರ್ದೇಶನ ಮಾಡಿದೆ.

| | | |
|---|---|---|
| **1.** | **ಶೃಂಗೇರಿ ತಾಲ್ಲೂಕು:** | |
| | **ಶ್ರೀಮತಿ:ಶ್ರೀ** | |
| 1. | ಹೆಚ್.ಎಂ. ರಾಮಪ್ಪಗೌಡ ಬಿನ್ ಮಂಜಪ್ಪಗೌಡ, ಭಾರತಿ ಬೀದಿ, ಶೃಂಗೇರಿ. | ಅಧ್ಯಕ್ಷರು |
| 2. | ಮಹಾಬಲರಾವ್ ಬಿನ್ ಚಂದ್ರಯ್ಯ, ಕಕ್ಕರಣೆ, ನೆಮ್ಮಾರು ಅಂಚೆ, ಶೃಂಗೇರಿ ತಾಲ್ಲೂಕು. | ಸದಸ್ಯರು |
| 3. | ಶ್ರೀನಿವಾಸ ಆಚಾರ್ ಬಿನ್ ಹುವಾಚಾರ್, ಜರಕೋಡು, ಗಂಡಘಟ್ಟ ಅಂಚೆ, ಶೃಂಗೇರಿ ತಾಲ್ಲೂಕು. | ಸದಸ್ಯರು |
| 4. | ವಾಸಂತಿ ಕೋಂ ಐಲತುನಾಯ್ಕ, ಹಂಚಿರಿಕೆ, ಧರೀಕೊಪ್ಪ ಅಂಚೆ, ಶೃಂಗೇರಿ ತಾಲ್ಲೂಕು. | ಸದಸ್ಯರು |
| **2.** | **ಕೊಪ್ಪ ತಾಲ್ಲೂಕು:** | |
| 1. | ಕೆ.ಸಿ. ಸತೀಶ್ ಬಿನ್ ಚನ್ನೇಗೌಡ, ಕೆಳಕೊಪ್ಪ ದಯಂಬಳ್ಳಿ ಅಂಚೆ, ಕೊಪ್ಪ ತಾಲ್ಲೂಕು. | ಅಧ್ಯಕ್ಷರು |
| 2. | ಜಯಪ್ರಕಾಶ್, ಅಂಚೆ ಕೊಳಲು, ಕಲ್ಕೆರೆ ಅಂಚೆ, ಕೊಪ್ಪ ತಾಲ್ಲೂಕು. | ಸದಸ್ಯರು |
| 3. | ಟಿ.ಡಿ. ಪ್ರಸನ್ನಕುಮಾರ್, ವಕೀಲರು, ತಲಗೂರು, ಬಿಲಗದ್ದೆ ಅಂಚೆ, ಕೊಪ್ಪ ತಾಲ್ಲೂಕು. | ಸದಸ್ಯರು |
| 4. | ಕೆ.ಆರ್. ಗೀತಾ, ತಾಲ್ಲೂಕು ಪಂಚಾಯಿತಿ ಸದಸ್ಯರು, ಗುಡ್ಡೆ ತೋಟ, ಕೊಪ್ಪ ತಾಲ್ಲೂಕು. | ಸದಸ್ಯರು |
| **3.** | **ನರಸಿಂಹರಾಜಪುರ ತಾಲ್ಲೂಕು:** | |
| 1. | ಎಸ್.ಡಿ. ರಾಜೇಂದ್ರ, ಸೂಸಲುವಾನಿ, ನರಸಿಂಹರಾಜಪುರ ತಾಲ್ಲೂಕು. | ಸದಸ್ಯರು |
| 2. | ಟಿ.ವಿ. ವರ್ಗಿಸ್ (ರಾಜು), ಮುಖ್ಯ ರಸ್ತೆ, ನರಸಿಂಹರಾಜಪುರ. | ಸದಸ್ಯರು |
| 3. | ನೇತ್ರಾವತಿ ತಂದೆ ಶ್ರೀ ನಾಗಪ್ಪ, ನಾಗರಮಕ್ಕಿ, ಸೀತೂರು, ಬೆಳ್ಳೂರು ಅಂಚೆ, ನರಸಿಂಹರಾಜಪುರ ತಾಲ್ಲೂಕು. | ಸದಸ್ಯರು |
| **4.** | **ಯಾದಗಿರಿ ತಾಲ್ಲೂಕು:** | |
| 1. | ನಾಗನಾಥ ರಾವ್ ತೊಟ್ಲೂರ್‌ಕರ್, ಗುರುಮಿಟಕಲ್ ರಸ್ತೆ, ಯಾದಗಿರಿ, ಗುಲ್ಬರ್ಗಾ ಜಿಲ್ಲೆ. | ಅಧ್ಯಕ್ಷರು |
| 2. | ಬಿಚ್ಚಣ್ಣ, ಜೈಗ್ರಾಂ, ಯಾದಗಿರಿ ತಾಲ್ಲೂಕು, ಗುಲ್ಬರ್ಗ ಜಿಲ್ಲೆ. | ಸದಸ್ಯರು |
| 3. | ಸೋಮ್ಲಿಬಾಯಿ ಗಂಡ ಪೂಜ್ಯ, ಬಾಚಾವಾರ ಹೊಸ ತಾಂಡ್ಯ, ಯಾದಗಿರಿ ತಾಲ್ಲೂಕು, ಗುಲ್ಬರ್ಗ ಜಿಲ್ಲೆ. | ಸದಸ್ಯರು |
| 4. | ಪಾಪಣ್ಣ ತಂದೆ ಸಾಯಣ್ಣ ಅಲೆಗಾರ್, ಗುರುಮಿಟಕಲ್, ಯಾದಗಿರಿ ತಾಲ್ಲೂಕು, ಗುಲ್ಬರ್ಗ ಜಿಲ್ಲೆ. | ಸದಸ್ಯರು |
| **5.** | **ಹುಮ್ನಾಬಾದ್ ತಾಲ್ಲೂಕು:** | |
| 1. | ರಾಮಶೆಟ್ಟಿ ಪಾಟೀಲ್, ಉಡಬಾಳ ಗ್ರಾಮ. | ಅಧ್ಯಕ್ಷರು |
| 2. | ಬಸವರಾಜ್ ಪೂಜಾರಿ | ಸದಸ್ಯರು |
| 3. | ಮರಿಯಮ್ಮ ಮನ್ನಾ ಎಖ್ಖೇಳಿ ಗ್ರಾಮ. | ಸದಸ್ಯರು |
| 4. | ಮಾಣಿಕ್, ದುಮ್ಮನ್‌ಸೂರು ಗ್ರಾಮ. | ಸದಸ್ಯರು |
| **6.** | **ರಾಮದುರ್ಗ ತಾಲ್ಲೂಕು:** | |
| 1. | ಸಂಗಮೇಶ ಎಸ್. ಶೆಟ್ಟಿ, ಸದಾವರ್ತಿ, ಸಾ: ಕಟಕೋಳ. | ಅಧ್ಯಕ್ಷರು |
| 2. | ಸಿದ್ದಲಿಂಗಪ್ಪ ಗದಿಗಪ್ಪ ಕ್ವಾರಿ, ಸಾ: ತೂರನೂರ. | ಸದಸ್ಯರು |
| 3. | ವೆಂಕಟೇಶ್ ಪ್ರಹ್ಲಾದ ಕುಲಕರ್ಣಿ, ಸಾ: ರಾಮದುರ್ಗ. | ಸದಸ್ಯರು |
| 4. | ನಾಗವ್ವ ನಾಗಪ್ಪ ಬಂಡಿವಡ್ಡರ, (ಬಂಗಾರಖಡೆ), ವಡ್ಡರ ಓಣಿ, ರಾಮದುರ್ಗ. | ಸದಸ್ಯರು |
| **7.** | **ಕುಂದಾಪುರ ತಾಲ್ಲೂಕು:** | |
| 1. | ರಮೇಶ್ ಗಾಣಿಗ, ಗುತ್ತಿಗೆದಾರರು, ಕೊಲ್ಲೂರು, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ. | ಅಧ್ಯಕ್ಷರು |
| 2. | ಕಾವೇರಿ ಬ್ಯಾ ಕೋಂ ರಾಮನಾಯ್ಕ, ಕಾವೇರಿ ನಿಲಯ, ಗಂಟಬೀಳು, ಅರ್ಡಿ, | ಸದಸ್ಯರು |
| 3. | ನವೀನ ಚಂದ್ರಶೆಟ್ಟಿ ಬಿನ್ ರಾಘುರಾಮ ಶೆಟ್ಟಿ, ವಿರೇಶ್ವರ -ಸಿದ್ದಾಪುರ, ಕುಂದಾಪುರ ತಾಲ್ಲೂಕು. | ಸದಸ್ಯರು |
| 4. | ಸಂತೋಷ ಕುಮಾರ್ ಶೆಟ್ಟಿ, ಮಾಜಿ ಜಿಲ್ಲಾ ಪಂಚಾಯತ್ ಸದಸ್ಯರು, ಹಕ್ಲಾಡಿ, ಕುಂದಾಪುರ ತಾಲ್ಲೂಕು. | ಸದಸ್ಯರು |

| | | |
|---|---|---|
| 8. | ಧಾರವಾಡ ತಾಲ್ಲೂಕು: | |
| 1. | ಮಸ್ತಕ್ ಅಹಮದ್ ಮೌಲಾ ಬಕ್ಷಿ, ಟೆಗೂರು, ಐನಾವರ್, ಧಾರವಾಡ ತಾಲ್ಲೂಕು. | ಅಧ್ಯಕ್ಷರು |
| 2. | ಪಾಯಪ್ಪ, ಗರಗ್, ಧಾರವಾಡ ತಾಲ್ಲೂಕು. | ಸದಸ್ಯರು |
| 3. | ಬಸವರಾಜು ವೀರಣ್ಣ ಬೋರ್ಕರ್, ತಡಕೋಡ್, ಧಾರವಾಡ್ ತಾಲ್ಲೂಕು. | ಸದಸ್ಯರು |
| 4. | ಗೀತಾ ಬಿನ್ ಶಿವಪ್ಪ, ಬಿದರಿಕಟ್ಟಿ, 1ನೇ ಕ್ರಾಸ್, ಸಾದನಕೇರಿ, ಧಾರವಾಡ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ವತ್ಸಲ**

ಪಿ.ಆರ್. 191

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ವಿಷಯ:** ದಿನಾಂಕ: 24.10.1980 ಕ್ಕಿಂತ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ರಚಿಸಿರುವ ತಾಲ್ಲೂಕು ಮಟ್ಟದ ಸಮಿತಿಗಳಿಗೆ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಅಪಜೀ 361 ಎಫ್‌ಜಿಎಲ್ 2002 (ಭಾಗ), ದಿನಾಂಕ: 1.12.2003.

2) ಮುಖ್ಯ ಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ: ಸಿಎಂಪಿಎಸ್:28/04, ದಿನಾಂಕ: 14.1.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 24.10.1980ರ ಪೂರ್ವದ ಅರಣ್ಯ ಭೂಮಿಯ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ಪ್ರತಿ ತಾಲ್ಲೂಕಿಗೆ ಒಂದರಂತೆ ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸಲಾಗಿದೆ. ಶಿಕಾರಿಪುರ ತಾಲ್ಲೂಕು ಮಟ್ಟದ ಸಮಿತಿಗೆ ನಾಮ ನಿರ್ದೇಶನ ಮಾಡಲು ಅಧ್ಯಕ್ಷರು ಮತ್ತು ಸದಸ್ಯರ ಹೆಸರುಗಳನ್ನು ಮೇಲೆ ಓದಲಾದ ಉಲ್ಲೇಖ (2)ರ ಟಿಪ್ಪಣಿಯಲ್ಲಿ ಸೂಚಿಸಲಾಗಿದೆ.

ಅದರಂತೆ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನವನ್ನು ಮಾಡಲು ಉದ್ದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 359 ಎಫ್‌ಜಿಎಲ್ 2003, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2004**

ದಿನಾಂಕ: 1.12.2003 ರಲ್ಲಿ ರಚಿಸಲಾದ ತಾಲ್ಲೂಕು ಮಟ್ಟದ ಸಮಿತಿಗಳಲ್ಲಿ ಕೆಳಕಂಡ ಶಿಕಾರಿಪುರ ತಾಲ್ಲೂಕಿಗೆ ಸಂಬಂಧಿಸಿದಂತೆ ಕೆಳಕಂಡ ಅಧ್ಯಕ್ಷರು ಮತ್ತು ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮ ನಿರ್ದೇಶನ ಮಾಡಿದೆ.

| | | |
|---|---|---|
| 1. | ಶಿಕಾರಿಪುರ ತಾಲ್ಲೂಕು: | |
| | ಶ್ರೀಮತಿ:ಶ್ರೀ | |
| 1. | ಪರಮೇಶ್ವರಪ್ಪ ಬಿನ್ ರೇವಪ್ಪ, ಹಿತ್ಲ ಗ್ರಾಮ, ಶಿಕಾರಿಪುರ ತಾಲ್ಲೂಕು. | ಅಧ್ಯಕ್ಷರು |
| 2. | ಗೌರಮ್ಮ ಕೋಂ ಶಿವಾನಂದಪ್ಪ, ಎಸ್.ಎಸ್. ರಸ್ತೆ, ಶಿರಾಳಕೊಪ್ಪ. | ಸದಸ್ಯರು |
| 3. | ಶೇಖ್ ಅಹಮದ್ ಬಿನ್ ಎಂ. ಅಬ್ದುಲ್‌ಸಾಬ್, ಹಳೂರು, ಶಿರಾಳಕೊಪ್ಪ. | ಸದಸ್ಯರು |
| 4. | ರಮೇಶ್ ಬಿನ್ ಲಕ್ಕಪ್ಪ ಅಂಬೇಡ್ಕರ್ ನಗರ, ಶಿಕಾರಿಪುರ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ವತ್ಸಲ**

ಪಿ.ಆರ್. 192

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಹಾಲಿ ನಿಯೋಜನೆಯ ಮೇಲೆ ವ್ಯವಸ್ಥಾಪಕ ನಿರ್ದೇಶಕರು, ಗಂಗಾವತಿ ಸಕ್ಕರೆ ಕಾರ್ಖಾನೆ, ಗಂಗಾವತಿ, ಇವರು ಕೋರಮಂಗಲ ಬಡಾವಣೆಯ ಕೃಷ್ಣಾ ಬ್ಲಾಕ್‌ನ ಸರ್ಕಾರದ ವಸತಿ ಗೃಹ ಸಂಖ್ಯೆ:120ನ್ನು ಉಪ ಬಾಡಿಗೆ ನೀಡಿದ್ದ ಬಗ್ಗೆ ಹಾಗೂ ಈ ವಸತಿ ಗೃಹವನ್ನು ಉಪ ಬಾಡಿಗೆ ಪಡೆದ ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ತಾಲ್ಲೂಕು ಪಂಚಾಯತ್, ಕನಕಪುರ, ಇವರುಗಳ ವಿರುದ್ಧದ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿಯನ್ನು ಬದಲಾಯಿಸಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ವಾಕೈ 40 ಕೈಸೇವಿ 2002, ದಿನಾಂಕ: 30.12.2003.-

2) ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಪತ್ರಸಂಖ್ಯೆ: ಕೈವಾಇ:ನಿರೀ-2:ಕೇಂಕ:ಶಿಕ್ರ:12: 2003-04, ದಿನಾಂಕ: 30.12.2003.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 30.12.2003ರ ಆದೇಶದಲ್ಲಿ, ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಹಿಂದೆ ಉಪನಿರ್ದೇಶಕರಾಗಿ ಕೈಮಗ್ಗ ಮತ್ತು ಜವಳಿ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ

ಅವರಿಗೆ ಬೆಂಗಳೂರಿನ ಕೋರಮಂಗಲ ಬಡಾವಣೆಯ ಕೃಷ್ಣಾ ಬ್ಲಾಕ್‌ನ ಸರ್ಕಾರಿ ವಸತಿ ಗೃಹ ಸಂಖ್ಯೆ: 120ನ್ನು ಬಾಡಿಗೆ ಆಧಾರದ ಮೇಲೆ ಹಂಚಿಕೆ ಮಾಡಿದ್ದನ್ನು ಅವರು ಆ ವಸತಿ ಗೃಹವನ್ನು ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕೆ ವಿಸ್ತರಣಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಉಪ ಬಾಡಿಗೆ ನೀಡಿ ಸರ್ಕಾರಿ ವಸತಿಗೃಹ ಹಂಚಿಕೆ ನಿಯಮಾವಳಿಗಳನ್ನು ಉಲ್ಲಂಘಿಸಿರುವುದರಿಂದ, ಕರ್ನಾಟಕ ಸರ್ಕಾರ (ಸರ್ಕಾರಿ ವಸತಿ ಗೃಹಗಳ ಹಂಚಿಕೆ) ನಿಯಮಗಳು 1999ರ ನಿಯಮ 22ರ ಪ್ರಕಾರ ಕೆ.ಸಿ.ಎಸ್. (ಸಿಸಿಎ) ನಿಯಮಗಳ ಮೇರೆಗೆ ಶಿಸ್ತು ಕ್ರಮಕ್ಕೆ ಒಳಪಡಿಸಲು ಲೋಕೋಪಯೋಗಿ ಇಲಾಖೆಯು ಕೋರಿದ ಮೇರೆಗೆ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದ್ದ ಶ್ರೀ ಕೆ.ಎಂ. ವೈದ್ಯ, ಮಾನ್ಯ ನಿವೃತ್ತ ನ್ಯಾಯಾಧೀಶರು, ಇವರು ತಮ್ಮ ಅನಾರೋಗ್ಯ ನಿಮಿತ್ತ ವಿಚಾರಣೆಯನ್ನು ಕೈಗೆತ್ತಿಕೊಳ್ಳಲು ಸಾಧ್ಯವಿಲ್ಲವೆಂದು ತಿಳಿಸಿರುವುದರ ಮೇರೆಗೆ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾದ ಶ್ರೀ ಕೆ.ಎಂ. ವೈದ್ಯರವರ ಬದಲಾಗಿ ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸುವಂತೆ ಕೋರಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 40 ಕೈಸೇವಿ 2002, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಪರಿಶೀಲಿಸಿದ ನಂತರ, ಕರ್ನಾಟಕ ಸರ್ಕಾರಿ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರ ಉಪನಿಯಮ (5)ನ್ನು ಓದುವುದರೊಡನೆ ಅದೇ ನಿಯಮದ ಉಪ ನಿಯಮ (2) ರಲ್ಲಿ ಪ್ರದತ್ತವಾಗಿರುವ ಅಧಿಕಾರಗಳನ್ನು ಚಲಾಯಿಸಿ, ಸರ್ಕಾರದ ಆದೇಶ ಸಂಖ್ಯೆ: ವಾಕೈ 40 ಐಸಿಎಸ್ 2002, ದಿನಾಂಕ: 30.12.2003ನ್ನು ಭಾಗಶಃ ಮಾರ್ಪಡಿಸಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದ್ದ, ಶ್ರೀ ಕೆ.ಎಂ. ವೈದ್ಯ, ನಿವೃತ್ತ ನ್ಯಾಯಾಧೀಶರು, ಇವರ ಬದಲಾಗಿ, ಸದರಿ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ವೆಂಕಟೇಶ್ ಪಾಟೀಲ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, "ಮಕರಂದ", ನಂ.7, 1ನೇ ಕ್ರಾಸ್, ನ್ಯಾಯಾಂಗ ಅಧಿಕಾರಿಗಳ ಬಡಾವಣೆ, ರಾಜಮಹಲ್ ವಿಲಾಸ್, 2ನೇ ಹಂತ, ಸಂಜಯನಗರ, ಬೆಂಗಳೂರು-560094, ಇವರನ್ನು ಕರ್ನಾಟಕ ಸರ್ಕಾರಿ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11 ರಡಿಯಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ ಹಾಗೂ ಸದರಿ ವಿಚಾರಣೆಯನ್ನು ಮೂರು ತಿಂಗಳ ಕಾಲಮಿತಿಯೊಳಗೆ ಪೂರೈಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ನಿರ್ದೇಶಿಸಲಾಗಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿರುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಒದಗಿಸಲು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ : ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಸೂಚಿಸಲಾಗಿದೆ.

ಈ ಪ್ರಕರಣದ ವಿಚಾರಣೆಗಾಗಿ ರೂ.5,000.00 (ರೂಪಾಯಿ ಐದು ಸಾವಿರಗಳು ಮಾತ್ರ) ಮತ್ತು ವಾಹನ ಭತ್ಯೆ ರೂ.1,000.00 (ರೂಪಾಯಿ ಒಂದು ಸಾವಿರಗಳು ಮಾತ್ರ) ಸಂಚಿತ ಸಂಭಾವನೆಗಳನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಕೈಗಾರಿಕಾಭಿವೃದ್ಧಿ ಆಯುಕ್ತರೇ ಪಾವತಿ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 193 ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕೈಗಾರಿಕಾ ಸೇವೆಗಳು).

## ENERGY SECRETARIAT

**Sub:** Payment Security Mechanism (PSM) for Power projects to be set up by Independent Power Producers (IPPs).

**PREAMBLE:**

1. Karnataka has been a chronically power deficit State. At present the demand gap is about 2250 MW. According to a load forecast study made by KPTCL with the assistance of Consultants, the deficit will increase to 3,450 MW by the end of the Xth Five Year Plan (2006-07) and to 5,300 MW by the end of the $11^{th}$ Plan period (2011-12).

2. Three consecutive years of drought have exposed the vulnerability of the State in the energy sector. Compared to other States, Karnataka is dependent on hydel power to a greater extent. Availability of hydel power has fallen drastically and KPTCL has been forced to buy increasing quantities of power from outside the State. For greater energy security it is essential to have more non-hydel generation sources within the State.

3. Karnataka Power Corporation has taken up projects, which will create 2,675 MW of additional generation capacity of which 2315 MW will be available to meet the peak demand. We expect to get 1,032 MW as our share of capacity addition by central generating stations. Hence we can expect a total addition of 3,347 MW of generation capacity which will be available for our State. This will not be enough

to fully cover the anticipated demand deficit. The Governor's address to the State Legislature on 5.1.2004 states that the Government is determined to make chronic power shortages a thing of the past. Hence it is also necessary to encourage some addition to generation capacity by IPPs.

4. In Karnataka there are now 4 Thermal power plants run by IPPs with a total capacity of 458MW. There are 3 proposed thermal power projects of IPPs which are expected to materialize and which have been included by Government of India among the projects to be completed in the 10th Plan period, viz., Nagarjuna Power Project (1015 MW), Jindal (500 MW) and KEI, Bijapur(350 MW). At a meeting conducted by the Chief Minister on 5th September 2003, it was decided that these IPP Projects should be supported in the interest of the State.

5. Power projects have a long gestation period and a long life. They require sustained and long-term funding that can best be provided by financial institutions that are dedicated to the power sector. In our country PFC is the primary funding agency for power projects. PFC in its letter dt.13.6.2003 to the Principal Secretary, Energy Department, has stated that in the case of IPP Projects, PFC requires a 3 tier Payment Security Mechanism consisting of letter of credit, escrow, and State Government Guarantee. Managing Director, KPTCL, has had discussions with PFC and has recommended that 3 tier PSM may be given as follows:

a) letter of credit – an irrevocable revolving Letter of Credit for an amount equal to the sum of one month capacity charge and energy charge based on a PLF of 100%;
b) escrow facility to cover debt portion of the project cost equivalent to 70% of the project cost with the escrow being operationalised 30 days prior to COD of the project. Previously escrow used to be operational from day one of project construction and would cover equity as well as debt;
c) State Government Guarantee to cover the payment obligations of KPTCL for the energy purchased from the IPPs.

6. However, the IPP policy of the Government issued in G.O.No:DE 14 PSR 99(P-3) dt.8th January 2001 states that no provision of escrow facilities or similar arrangements and no provision of any other form of guarantees to any IPP would be available. Hence granting PSM in respect of the power projects of IPPs would require revision of the existing policy. It may be noted that after the IPP policy came into force no new thermal power plant has been set up in our State by any IPP.

7. Government of India is in favour of new IPP Power Projects being established in Karnataka. The Union Minister of Power in his letter dt.15.10.2003 addressed to the Chief Minister has requested to expedite the capacity addition programme and has stated as follows:

" Under private sector, Thorangallu extn.project (2 x 250 MW) and Bijapur TPP (350 MW) are expected to take off for completion within 10th Plan, once matters relating to Payment Security Mechanism (PSM) and financial restructuring plan (FRP) and all related clearances are addressed expeditiously. In view of this, you may like to intervene and provide appropriate guidance for resolving the issue related to FRP. Further, I understand that KPTCL has evolved and submitted a revised PSM for approval of the State Government. I would request you to kindly ensure that required action is initiated urgently to resolve these issues so that works related to the said projects are started at the earliest and completed well within the 10th Plan".

8. The Chairman, CEA, in his letter dated 30-10-2003 to the Chief Secretary pointed out that even after KPCL's projects are commissioned, there will still be shortage of power in Karnataka and therefore additional capacity should be added during 10th Plan. He requested to take necessary steps to facilitate the implementation of the 3 IPPs during the 10th Plan.

9. The main features of the existing IPP policy are as follows:

a) the total capacity addition to be encouraged over 10 year period from 2000-01 to 2009-10 would be in the range of 3500-4000 MW;
b) naphtha/liquid fuel based or barge mounted projects would not be encouraged as they are not cost effective;
c) no provision of escrow facility or similar arrangements and no provision of any other form of guarantee to any IPP would be available.

10. The decision not to grant escrow facility was based on the report of the High Level Committee on escrow cover to IPPs headed by Sri.Deepak Parekh, Chairman, HDFC, which was brought out in February 2000. The Deepak Parekh Committee stated that considering the financial position of

KPTCL at that time, escrow capacity was not available then. Escrows are also undesirable since they endanger the proposed privatization of the distribution system. Government of Karnataka, as owner of KPTCL should not provide escrow cover to any IPP. However, this recommendation of the Deepak Parekh Committee should not be read in isolation. The Committee also recommended that the process of transferring the distribution system to private ownership should be completed as soon as possible. The private distribution companies would make their own arrangements to procure energy and as they would be more efficient then the Government distribution companies, they would have no difficulty in paying for the power purchased from IPPs. The report states "the Committee has advised against the interim solution of providing escrow cover to IPPs in the expectation that the privatisation of distribution that has already been announced will create viable entities for the purchase of power from IPPs". However, almost 4 years have passed since the Deepak Parekh Committee report came out and no distribution company in Karnataka has been privatized so far.

11. The Deepak Parekh Committee also recommended that all future development of thermal capacity in Karnataka should be in the private sector. But, no private thermal power plants have come up precisely because of the Committee's recommendation not to grant escrow cover to IPPs.

12. It is also seen that the existing IPP Policy is based on the assumption that capacity addition of 3,500-4,000 MW by the year 2010 is adequate, whereas according to KPTCL's recent load forecast 5300 MW of additional capacity would be required by 2011-12. The IPP policy itself states that a separate estimate was made by one of the members of the IPP Committee (Sri.B.G.Rudrappa, former Chairman, KEB) which gave a requirement of 5,257 MW. The IPP policy also states " in case the requirement is based on the GDP: power elasticity applicable to the Indian context the capacity addition will have to be much more". The policy also assumes that the T & D losses will be brought down from 26% to 14% in the course of 10 years through investment of Rs.13,500 crores. The policy also states that there are 14 IPPs with proposed capacity addition of 2,450 MW for which PPAs have been signed. However, now only 4 IPPs have materialized with total capacity of 458 MW only. It appears that the IPP Committee made a conservative estimate of the demand for power and the additional capacity required and concluded that there is no necessity to encourage any more IPPs and consequently felt that PSM for IPPs was not required.

13. No new IPP has come up in the State in the last 4 years. In effect we have lost 4 years. If we continue with the existing IPP Policy, no new large power projects of IPPs will come up in the State. This means we will have to depend exclusively on KPCL and Government of India to meet our additional power requirements in future. However, this would not be sufficient and the energy deficit would continue to grow. This in turn would slow down the rate of economic growth and would depress the standard of living. In the long-term strategic interests of the State, Government should ensure that the energy requirements of the growing economy are met and we should have a variety of generation sources located within the State. Hence it has become inevitable to revise the IPP Policy

**GOVERNMENT ORDER NO:DE:81:PPC:2003(P) BANGALORE DATED:6th February 2004**

Government of Karnataka hereby makes the following modifications in the IPP Policy for the power sector:

(a) the total capacity addition to be encouraged during the period 2004-05 to 2011-12 would be in the range of 5,500 MW.

(b) Payment Security Mechanism will be provided for thermal power projects of IPPs consisting of the following:

- (i) an escrow facility that will cover only the debt portion of the project cost, normally 70% of the project cost.
- (ii) the escrow facility will be operationalised only 30 days before the commercial operation date(COD) of the Project.
- (iii) State Government Guarantee.
- (iv) an irrevocable revolving Letter of Credit for an amount equal to at least one month's capacity charge and energy charge on 85% PLF.

(c) the PSM will be available only in respect of coal-based and gas-based power projects.

(d) KPTCL/Escoms shall obtain prior approval of Government before entering into PPA with any IPP.

By Order and in the Name of the Governor of Karnataka,

**K.L. JAYARAM**

Under Secretary to Government, Energy Department

PR-194

## ಜಲಸಂಪನ್ಮೂಲ ಸಚಿವಾಲಯ

**ಅಡೆಂಡಮ್ ಸಂಖ್ಯೆ: ಜಸಂಇ 404 ಎಂಎಂಕೆ 2002, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2004**

**ವಿಷಯ:** ಕೆ.ಆರ್.ಎಸ್. ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ನೀಇ 237 ಎಂಎಂಕೆ 99, ದಿನಾಂಕ: 08.05.2000.
2) ಸರ್ಕಾರಿ ಅಡೆಂಡಮ್ ಸಂಖ್ಯೆ: ನೀಇ 366 ಎಂಎಂಕೆ 2000, ದಿನಾಂಕ: 11.05.2001.
3) ಸರ್ಕಾರಿ ಅಡೆಂಡಮ್ ಸಂಖ್ಯೆ: ನೀಇ 120 ಎಂಎಂಕೆ 2001, ದಿನಾಂಕ: 19.06.2001.
4) ಸರ್ಕಾರಿ ಅಡೆಂಡಮ್ ಸಂಖ್ಯೆ: ನೀಇ 40 ಎಂಎಂಕೆ 2002, ದಿನಾಂಕ: 15.05.2002.
5) ಸರ್ಕಾರಿ ಅಡೆಂಡಮ್ ಸಂಖ್ಯೆ: ನೀಇ 118 ಎಂಎಂಕೆ 2002, ದಿನಾಂಕ: 31.07.2002.
6) ಸರ್ಕಾರಿ ಅಡೆಂಡಮ್ ಸಂಖ್ಯೆ: ನೀಇ 114 ಎಂಎಂಕೆ 2002, ದಿನಾಂಕ: 02.08.2002.

ಕೃಷ್ಣರಾಜಸಾಗರ ಜಲಾಶಯದ ನೀರಿನ ನಿರ್ವಹಣೆಗಾಗಿ ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನೊಳಗೊಂಡ ಕೃಷ್ಣ ರಾಜಸಾಗರ ನೀರಾವರಿ ಸಲಹಾ ಸಮಿತಿಯನ್ನು ಉಲ್ಲೇಖಿತ ಸರ್ಕಾರಿ ಆದೇಶಗಳಲ್ಲಿ ಪುನರ್ ರಚಿಸಲಾಗಿತ್ತು.

ಸದರಿ ಸಮಿತಿಗೆ ಉಲ್ಲೇಖ (1)ರ ಸರ್ಕಾರಿ ಆದೇಶದಲ್ಲಿ ಅಧಿಕಾರೇತರ ಸದಸ್ಯರ ಪಟ್ಟಿಯಲ್ಲಿದ್ದ (ಕ್ರಮ ಸಂಖ್ಯೆ 7) ಅಧ್ಯಕ್ಷರು, ಕಾಡಾ, ಕಾವೇರಿ ಜಲಾನಯನ ಯೋಜನೆಗಳು, ಮೈಸೂರು, ಇವರನ್ನು ಉಲ್ಲೇಖಿತ (6)ರ ಸರ್ಕಾರಿ ಆದೇಶದಲ್ಲಿ ಕೆ.ಆರ್.ಎಸ್. ಯೋಜನೆಯ ನೀರಾವರಿ ಸಲಹಾ ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿರುವುದರಿಂದ ತೆರವಾಗಿರುವ ಅಧಿಕಾರೇತರ ಸದಸ್ಯರ ಪಟ್ಟಿಯಲ್ಲಿ ಡಾ: ಎನ್.ಎಲ್. ಭಾರತೀ ಶಂಕರ್, ವಿಧಾನ ಸಭಾ ಸದಸ್ಯರು, ಟಿ. ನರಸೀಪುರ, ಇವರನ್ನು ಕೆ.ಆರ್.ಎಸ್. ಯೋಜನೆಯ ನೀರಾವರಿ ಸಲಹಾ ಸಮಿತಿಯ ಅಧಿಕಾರೇತರ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಸೇರ್ಪಡೆ ಮಾಡಲಾಗಿದೆ.

ಹಾಗೂ ಸದರಿ ಸಮಿತಿಗೆ ಉಲ್ಲೇಖಿತ ಸರ್ಕಾರದ ಆದೇಶ (1) ರಲ್ಲಿ ಶ್ರೀ ವಿವೇಕಾನಂದ, ಜಿಲ್ಲಾ ಪಂಚಾಯತ್ ಸದಸ್ಯರು, ಮಂಡ್ಯ, ಇವರನ್ನು ವಿಶೇಷ ಆಹ್ವಾನಿತರನ್ನಾಗಿ ಸೇರ್ಪಡೆ ಮಾಡಲಾಗಿರುವುದನ್ನು ರದ್ದುಪಡಿಸಿ, ಇವರ ಬದಲಿಗೆ ಶ್ರೀ ಎನ್.ಡಿ. ಸಿದ್ದರಾಮು, ಬಿನ್ ದಾಸೇಗೌಡ, ನಿಲುವಾಗಿಲು, ಕೊಪ್ಪ ಹೋಬಳಿ, ಮದ್ದೂರು ತಾಲ್ಲೂಕು, ಇವರನ್ನು ಕೆ.ಆರ್.ಎಸ್. ಯೋಜನೆಯ ನೀರಾವರಿ ಸಲಹಾ ಸಮಿತಿಯ ವಿಶೇಷ ಆಹ್ವಾನಿತ ಸದಸ್ಯರನ್ನಾಗಿ ಕೂಡಲೇ ಜಾರಿಗೆ ಬರುವಂತೆ ಸೇರ್ಪಡೆ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಲ್. ಜಗದೀಶ್**

ಪಿ.ಆರ್. 195 ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ-3), ಜಲಸಂಪನ್ಮೂಲ ಇಲಾಖೆ.

**ವಿಷಯ:** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಬೇರ್ಕಾಡಿ ಗ್ರಾಮದ ಸರ್ಪಿನಕಟ್ಟೆ ಎಂಬಲ್ಲಿ ಮಡಿಸಾಲು ಹೊಳೆಗೆ ಅಡ್ಡಲಾಗಿ ಕಿಂಡಿ ಅಣೆಕಟ್ಟು ನಿರ್ಮಾಣ ಮಾಡುವ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ದಿನಾಂಕ: 23.08.2003ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದ ಸಂಖ್ಯೆ: ಮುಇಂ/ಸನೀ(ದ)/ಮಂಗಳೂರು/ಉಡುಪಿ/ಸರ್ಪಿನಕಟ್ಟೆ ಕಿಂ.ಅ /2003-04/2269.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಬೇರ್ಕಾಡಿ ಗ್ರಾಮದ ಸರ್ಪಿನಕಟ್ಟೆ ಎಂಬಲ್ಲಿ ಮಡಿಸಾಲು ಹೊಳೆಗೆ ಅಡ್ಡಲಾಗಿ ನಿರ್ಮಿಸಲು ಉದ್ದೇಶಿಸಿರುವ ಕಿಂಡಿ ಅಣೆಕಟ್ಟು ಕಾಮಗಾರಿಯ 75.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿರುತ್ತಾರೆ.

ಅಂದಾಜಿನಲ್ಲಿ ತಿಳಿಸಿರುವಂತೆ ಉಡುಪಿ ತಾಲ್ಲೂಕಿನ ಬೇರ್ಕಾಡಿ ಸರ್ಪಿನಕಟ್ಟೆ ಎಂಬಲ್ಲಿ ಮಡಿಸಾಲು ಹೊಳೆಗೆ ಅಡ್ಡಲಾಗಿ 52.00 ಮೀ. ಉದ್ದ, 2.00 ಮೀ. ಅಗಲ ಹಾಗೂ 4.20 ಮೀ. ಎತ್ತರದ 21 ಕಿಂಡಿಗಳನ್ನೊಳಗೊಂಡಂತೆ, ಕಿಂಡಿ ಅಣೆಕಟ್ಟು ನಿರ್ಮಿಸಲು ಪ್ರಸ್ತಾಪಿಸಲಾಗಿದೆ. 68.64 ಚದರ ಮೈಲಿಗಳ ಜಲಾನಯನ ಪ್ರದೇಶ ಹೊಂದಿರುವ ಈ ಅಣೆಕಟ್ಟಿನಲ್ಲಿ ಶೇಖರಿಸಲಾಗುವ 12.244 ಎಂ.ಸಿ.ಎಫ್.ಟಿ. ನೀರಿನಿಂದ 204 ಹೆಕ್ಟೇರ್ ಜಮೀನಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಲಾಗಿದೆ. ಕಾಮಗಾರಿಯ ಲಾಭ ವೆಚ್ಚದ ಅನುಪಾತವು ಶೇ.10ರ ಬಡ್ಡಿಯಂತೆ 2.45 ಆಗಿದ್ದು, ಯೋಜನೆಯು ಆರ್ಥಿಕವಾಗಿ ಶಕ್ಯವಾಗಿದೆ.

ಈ ಕಾಮಗಾರಿಯ 50.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ನಬಾರ್ಡ್ ಸಹಾಯಧನ ಪಡೆಯಲು ಸಂಪುಟ ಉಪ ಸಮಿತಿಯಿಂದ ಅನುಮೋದನೆ ದೊರೆತಿದೆ. ಅಂದಾಜು ಪಟ್ಟಿಯಲ್ಲಿನ ದರಗಳ ಪರಿಷ್ಕರಣೆಯಿಂದಾಗಿ ಈ ಅಂದಾಜು ಮೊತ್ತವು 75.00 ಲಕ್ಷ ರೂ.ಗಳಿಗೆ ಪರಿಷ್ಕರಿಸಲಾಗಿದೆ ಮತ್ತು ಪರಿಷ್ಕೃತ ಅಂದಾಜು ಪಟ್ಟಿಯನ್ನು ಧನ ಸಹಾಯಕ್ಕಾಗಿ ನಬಾರ್ಡ್ ಸಂಸ್ಥೆಗೆ ಸಲ್ಲಿಸಲಾಗಿದೆ.

ಈ ಕಾಮಗಾರಿಯು 2003-04ನೇ ಸಾಲಿನ ಆಯವ್ಯಯದ ಅನುಬಂಧ-ಇ ನಲ್ಲಿ ಲೆಕ್ಕ ಶೀರ್ಷಿಕೆ 4702-ಸಣ್ಣ ನೀರಾವರಿ ಮೇಲಿನ ಬಂಡವಾಳ ವೆಚ್ಚ-ಅಣೆಕಟ್ಟು, ಪಿಕಪ್ ಮತ್ತು ಬಾಂದಾರಗಳು ಅಡಿಯಲ್ಲಿ 75.00 ಲಕ್ಷ ರೂ.ಗಳ ಅಂದಾಜು ಹಾಗೂ 22.50 ಲಕ್ಷ ರೂ.ಗಳ ಅನುದಾನದೊಂದಿಗೆ ಸೇರಿದೆ. ಅಂದಾಜಿನ ಶೇ.30 ರಷ್ಟು ಅನುದಾನ ಲಭ್ಯವಿರುವುದರಿಂದ, ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 11 ಅಪಿಬಂ 2003, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಬೇರ್ಕಾಡಿ ಗ್ರಾಮದ ಸರ್ಪಿನಕಟ್ಟೆ ಎಂಬಲ್ಲಿ ಮಡಿಸಾಲು ಹೊಳೆಗೆ ಅಡ್ಡಲಾಗಿ ಕಿಂಡಿ ಅಣೆಕಟ್ಟು ನಿರ್ಮಾಣ ಮಾಡುವ ಕಾಮಗಾರಿಯ 75.00 ಲಕ್ಷ ರೂ.ಗಳ (ಎಪ್ಪತ್ತೈದು ಲಕ್ಷ ರೂ.ಗಳು ಮಾತ್ರ) ಅಂದಾಜು ಪಟ್ಟಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಯೋಜನೆಯ ಅಂದಾಜು ಪಟ್ಟಿಗೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ದಿನಾಂಕ: 28.10.2002 ರಂದು ನಡೆದ 6ನೇ ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸುವುದು.
2. ಸದರಿ ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅಂದಾಜು ವೆಚ್ಚವನ್ನು ಮೀರಕೂಡದು.
3. ಈ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20.1.2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಗೋವಿಂದರಾಜ್**

ಪಿ.ಆರ್. 196 ವಿಶೇಷ ಕರ್ತವ್ಯಾಧಿಕಾರಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಕಂದಾಯ ಸಚಿವಾಲಯ

**ವಿಷಯ:** ಬೆಳಗಾಂ ಜಿಲ್ಲೆಯ ನಿಪ್ಪಾಣಿಗೆ ವಿಶೇಷ ತಹಶೀಲ್ದಾರರನ್ನು ನೇಮಿಸುವ ಬಗ್ಗೆ.

**ಪ್ರಸ್ತಾವನೆ:**

ರಾಜ್ಯದಲ್ಲಿ ಹೊಸ ತಾಲ್ಲೂಕುಗಳನ್ನು ರಚಿಸಲು ನೇಮಿಸಲಾಗಿರುವ ಶ್ರೀ ಗದ್ದಿಗೌಡರ್ ಸಮಿತಿಯು ಹೊಸ ತಾಲ್ಲೂಕುಗಳನ್ನು ರಚಿಸುವ/ಪುನರ್ವಿಂಗಡಿಸುವ ಬಗ್ಗೆ ತಮ್ಮ ಶಿಫಾರಸ್ಸು ನೀಡಿದೆ. ಸದರಿ ಶಿಫಾರಸ್ಸುಗಳ ಪೈಕಿ ಬೆಳಗಾಂ ಜಿಲ್ಲೆಯ ನಿಪ್ಪಾಣಿಯನ್ನು ತಾಲ್ಲೂಕು ಕೇಂದ್ರವನ್ನಾಗಿ ರಚಿಸಲು ಈ ಸಮಿತಿಯು ಶಿಫಾರಸ್ಸು ಮಾಡಿದೆ.

ಆದರೆ ಪ್ರಸ್ತುತ ರಾಜ್ಯದಲ್ಲಿ ಯಾವುದೇ ಹೊಸ ತಾಲ್ಲೂಕುಗಳನ್ನು ರಚಿಸದೇ ಇರಲು ಸರ್ಕಾರ ನಿರ್ಧರಿಸಿರುವುದರಿಂದ ಸದರಿ ಸಮಿತಿಯು ಶಿಫಾರಸ್ಸು ಮಾಡಿದ ಸ್ಥಳಗಳ ಪೈಕಿ ಕೆಲಸದ ಒತ್ತಡ ಯಾವ ತಾಲ್ಲೂಕುಗಳಲ್ಲಿ ಹೆಚ್ಚು ಇದೆಯೋ ಅಂತಹ ಕಡೆ ಪರ್ಯಾಯವಾಗಿ ವಿಶೇಷ ತಹಶೀಲ್ದಾರ್‌ಗಳನ್ನು ನೇಮಕ ಮಾಡಲು ಸರ್ಕಾರ ತೀರ್ಮಾನಿಸಿದೆ. ಈ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿನ ಕಛೇರಿ ಸಹಾಯಕ ಹುದ್ದೆಯನ್ನು ಬೆಳಗಾಂ ಜಿಲ್ಲೆಯ ನಿಪ್ಪಾಣಿಗೆ ವಿಶೇಷ ತಹಶೀಲ್ದಾರ್ ಎಂದು ಪುನರ್ನಾಮೀಕರಿಸಿ ಸ್ಥಳಾಂತರಿಸಲು ನಿರ್ಧರಿಸಿ ಈ ಕೆಳಕಂಡಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 09 ಎಎಸ್‌ಡಿ 2003, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭಗಳ ಹಿನ್ನೆಲೆಯಲ್ಲಿ ಹಾಗೂ ಆಡಳಿತ ಹಿತದೃಷ್ಟಿಯನ್ನು ಗಮನದಲ್ಲಿಟ್ಟು ಸರ್ಕಾರವು ದಾವಣಗೆರೆ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿನ ಕಛೇರಿ ಸಹಾಯಕ ಹುದ್ದೆಯನ್ನು ಬೆಳಗಾಂ ಜಿಲ್ಲೆಯ ನಿಪ್ಪಾಣಿಗೆ ವಿಶೇಷ ತಹಶೀಲ್ದಾರ್ ಎಂದು ಪುನರ್ನಾಮೀಕರಿಸಿ ಸ್ಥಳಾಂತರಿಸಲು ಆದೇಶಿಸಿದೆ.

ನಿಪ್ಪಾಣಿಯ ವಿಶೇಷ ತಹಶೀಲ್ದಾರ್ ಇವರು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 204 ಎಎಸ್‌ಡಿ 2003, ದಿನಾಂಕ: 31.1.2004 ರಲ್ಲಿ ಪ್ರತ್ಯಾಯೋಜಿಸಲಾದ ಅಧಿಕಾರದ ಪ್ರಕಾರ ಕರ್ತವ್ಯ ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಪಿ.ಆರ್. 197 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ಶಿಕ್ಷಣ ಸಚಿವಾಲಯ

**ವಿಷಯ:** 2004-05ನೇ ಸಾಲಿನಿಂದ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಸೆಮಿಸ್ಟರ್ ಮಾದರಿಯನ್ನು ಅಳವಡಿಸುವ ವಿಚಾರ.

**ಓದಲಾಗಿದೆ:** ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯ ನಿರ್ದೇಶಕರ ಸಂಖ್ಯೆ ರಹಿತ ಮತ್ತು ದಿನಾಂಕ ರಹಿತ ಪತ್ರ.

**ಪ್ರಸ್ತಾವನೆ:**

ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ತಜ್ಞರು, ಉಪನ್ಯಾಸಕರು, ಶಿಕ್ಷಕರು ಹಾಗೂ ಶಿಕ್ಷಣ ಇಲಾಖೆಯ ಅಧಿಕಾರಿಗಳು ದಿನಾಂಕ: 17.1.2004 ಮತ್ತು 30.1.2004 ರಂದು ಸಮಾಲೋಚಿಸಿ, ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 30.1.2004 ರಂದು ನಡೆದ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನದಂತೆ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಕ್ಷೇತ್ರದಲ್ಲಿ ಸುಧಾರಣೆಗಳನ್ನು ಮಾಡಬೇಕೆಂದು ನಿರ್ಣಯಿಸಲಾಯಿತೆಂದು, ಈಗಿರುವ ಶಿಕ್ಷಣ ವ್ಯವಸ್ಥೆಯಲ್ಲಿ ಪಠ್ಯಪುಸ್ತಕಗಳ ಹೊರೆ ಅಧಿಕವಾಗಿರುವ ಬಗ್ಗೆ ಸಾರ್ವಜನಿಕರಿಂದ ಬಹಳಷ್ಟು ಟೀಕೆ-ಟಿಪ್ಪಣಿಗಳು ಬಂದಿವೆ ಎಂದು, ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ಪಠ್ಯಪುಸ್ತಕಗಳ ಹೊರೆ ಕಡಿಮೆ ಮಾಡುವ ಬಗ್ಗೆ ದಿನಾಂಕ: 15.7.2003 ರಂದು ಸುತ್ತೋಲೆ ಹೊರಡಿಸಿದ್ದರು ಸಹ ಪಠ್ಯಪುಸ್ತಕದ ಹೊರೆ, ವಿಷಯದ ಹೊರೆ, ಕಲಿಕೆಯ ಹೊರೆ, ಪರೀಕ್ಷಾ ವ್ಯವಸ್ಥೆಯ ಬಗೆಗಿನ ಭಯ ಮುಂತಾದ ವಿಷಯಗಳ ಬಗ್ಗೆ ತಜ್ಞರು ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಮಾರ್ಪಾಡುಗಳನ್ನು ಮಾಡಲು ನಿರ್ಣಯಿಸಿದ್ದಾರೆಂದು ಡಿ.ಎಸ್.ಇ.ಆರ್.ಟಿ. ವತಿಯಿಂದ ಕಾರ್ಯಗಾರಗಳನ್ನು ನಡೆಸಿ, ಅವುಗಳ ಸಾರಾಂಶವನ್ನು ಶಿಕ್ಷಣ ಸಚಿವರ ಗಮನಕ್ಕೆ ತಂದು ದಿನಾಂಕ: 30.1.2004ರ ಸಭೆಯಲ್ಲಿ ತೆಗೆದುಕೊಂಡ ನಿರ್ಣಯಗಳ ಬಗ್ಗೆ ತಿಳಿಸುತ್ತ ಸೂಕ್ತ ಸರ್ಕಾರಿ ಆದೇಶವನ್ನು ಹೊರಡಿಸಲು ನಿರ್ದೇಶಕರು ಕೋರಿದ್ದಾರೆ.

The above Beneficiary Capital Contribution is including road cutting charges of Rs.1500/- for residential properties and Rs.3000/- for commercial properties to be collected by the ULBs but excluding access and connection charges to be levied by BWSSB.

2. The Beneficiary Capital Contribution should be collected by the ULBs as per the above structure and kept in GBWASP Beneficiary Capital Contribution Account to be held jointly by the concerned ULB and Karnataka Urban Infrastructure Development and Finance Corporation (KUIDFC) for further transfer to the BWSSB as and when required / to undertake road repairs.

3. Out of Beneficiary Capital Contribution, amount collected by the ULBs towards road cutting charges at Rs.1500/- per residential property and Rs.3000/- per commercial property will be retained by the ULBs in the said account and the balance amount paid to BWSSB as and when required by the BWSSB.

4. As a measure of collection ease, the ULBs shall collect Beneficiary Capital Contribution at the time of approval of building plans. For already sanctioned plans and other properties, it should be collected by giving wide publicity and conducting ward wise campaigns.

5. Mere payment of Beneficiary Capital Contribution will not relieve the citizen of obtaining other statutory permissions for layouts, building plan sanction, etc, wherever required as per rules nor does it entitle him for any regularization of building, layout, etc.

By Order and in the Name of the Governor of Karnataka,

**V.R. ILKAL**

PR-213 Under Secretary to Government, Urban Development Department.

**ಲೋಕೋಪಯೋಗಿ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಲೋಇ 193 ಸೇಸಕಿ 2003, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2004**

ಅಧಿಸೂಚನೆ ಸಂಖ್ಯೆ: ಲೋಇ 108 ಎಸ್‌ಪಿಎನ್ 2002, ದಿನಾಂಕ: 11.4.2002 ರಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪಿನನ್ವಯ ದಿನಾಂಕ: 1.3.2002 ರಲ್ಲಿದ್ದಂತೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದೆ. ಅದರಲ್ಲಿ, ಶ್ರೀ ಮಲ್ಲೇಶ್ವರಪ್ಪ, ಕಿರಿಯ ಇಂಜಿನಿಯರ್ ಇವರಿಗೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದಲ್ಲಿ ಜೇಷ್ಠತಾ ಕ್ರಮ ಸಂಖ್ಯೆಯು 2219 (ಕಿರಿಯ ಇಂಜಿನಿಯರ್ 5724) ರಲ್ಲಿ ಪ್ರತಿಬಿಂಬವಾಗಿದೆ. ನಂತರ ಶ್ರೀ ಮಲ್ಲೇಶ್ವರಪ್ಪ, ಕಿರಿಯ ಇಂಜಿನಿಯರ್ ಇವರು ದಿನಾಂಕ: 11.4.2002 ರಂದು ಪ್ರಕಟಿಸಿರುವ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ತಮಗಿಂತಲೂ ಜೇಷ್ಠತೆಯಲ್ಲಿ ಕಿರಿಯವರಾದ ಶ್ರೀ ಕೆ.ಸಿ. ಕೊಂಡಯ್ಯ (ಪರಿಶಿಷ್ಟ ಜಾತಿ) ಇವರ ಜೇಷ್ಠತೆಯನ್ನು ಕ್ರಮ ಸಂಖ್ಯೆ: 1764 (ಕಿರಿಯ ಇಂಜಿನಿಯರ್ 5726) ರಲ್ಲಿ ನಿಗದಿಪಡಿಸಿ ಅರ್ಹತಾ ದಿನಾಂಕವನ್ನು 15.9.95 ಎಂದು ನಿಗದಿಪಡಿಸಿರುವುದರಿಂದ ತಮಗೆ ವಿಶೇಷ ದರ್ಜೆ ಕಿರಿಯ ಇಂಜಿನಿಯರ್ ಹುದ್ದೆಯಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-2) ಹುದ್ದೆಗೆ ಬಡ್ತಿ ನೀಡುವ ಸಂದರ್ಭದಲ್ಲಿ ಅನ್ಯಾಯವಾಗಲಿದೆಯೆಂದು, ತಮ್ಮ ಜೇಷ್ಠತೆಯ ಸ್ಥಾನವನ್ನು ತಮಗಿಂತಲೂ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಕೆ.ಸಿ. ಕೊಂಡಯ್ಯ (ಪರಿಶಿಷ್ಟ ಜಾತಿ) ಇವರ ಜೇಷ್ಠತೆಯ ಮೇಲೆ ನಿಗದಿಪಡಿಸುವಂತೆ ಕೋರಿರುತ್ತಾರೆ. ದಿನಾಂಕ: 11.4.2002 ರಂದು ಪ್ರಕಟಗೊಂಡಿರುವ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಕೆ.ಸಿ. ಕೊಂಡಯ್ಯ ಇವರ ಜೇಷ್ಠತಾ ಕ್ರಮ ಸಂಖ್ಯೆ: 1764 (ಕಿರಿಯ ಇಂಜಿನಿಯರ್ 5726) ನ್ನು ಆಧಾರವಾಗಿಟ್ಟು, ಈ ಬಗ್ಗೆ ಪರಿಶೀಲಿಸಿ ಶ್ರೀ ಮಲ್ಲೇಶ್ವರಪ್ಪ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರ ಜೇಷ್ಠತೆಯನ್ನು ಈ ಕೆಳಕಂಡಂತೆ ನಿಗದಿಪಡಿಸಲು ನಿರ್ಧರಿಸಲಾಗಿದೆ. ಹಾಗೂ ದಿನಾಂಕ: 11.4.2002ರ ಅಧಿಸೂಚನೆಯಲ್ಲಿ ನಮೂದಿಸಿದ ಕ್ರಮ ಸಂಖ್ಯೆಗಳು ಈ ಕೆಳಕಾಣಿಸಿದಂತೆ ಬದಲಾವಣೆಯಾಗಲಿವೆ:

| ಕ್ರಮ ಸಂಖ್ಯೆ | ಕಿರಿಯ ಇಂಜಿನಿಯರ್ ಹುದ್ದೆಯ ಜೇಷ್ಠತಾಪಟ್ಟಿ ಕ್ರಮ ಸಂಖ್ಯೆ | ಹೆಸರು | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ | ಜನ್ಮ ದಿನಾಂಕ | ವಾಸ್ತವವಾಗಿ ಬಡ್ತಿ ಹೊಂದಿದ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|---|
| 2219 | 5724 | ಮಲ್ಲೇಶ್ವರಪ್ಪ | ಪರಿಶಿಷ್ಟ ಜಾತಿ | 19.1.51 | - | 10.10.1996 |
| ರ ಬದಲಾಗಿ | | | | | | |
| 1763-ಎ | 5724 | ಮಲ್ಲೇಶ್ವರಪ್ಪ | ಪರಿಶಿಷ್ಟ ಜಾತಿ | 19.1.51 | 23.6.99 | 15.9.1995 |

ಈ ಮೇಲೆ ತಿಳಿಸಿದಂತೆ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಮಲ್ಲೇಶ್ವರಪ್ಪ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರಿಗೆ ಅರ್ಹತಾ ದಿನಾಂಕ ಹಾಗೂ ಜೇಷ್ಠತೆ ಪುನರ್‌ನಿಗದಿಪಡಿಸುವ ಬಗ್ಗೆ ಯಾವುದೇ ಅಹವಾಲು : ಆಕ್ಷೇಪಣೆಗಳನ್ನು ಸಲ್ಲಿಸಲು ಇಚ್ಛಿಸುವ ನೌಕರರು ಈ ಅಧಿಸೂಚನೆ ಪ್ರಕಟಗೊಂಡ 15 ದಿನದೊಳಗಾಗಿ ಸೂಕ್ತ ದಾಖಲೆಗಳ ಸಮೇತ ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಬೆಂಗಳೂರು ಇವರಿಗೆ ಸಮರ್ಥನೀಯ ದಾಖಲೆಗಳೊಂದಿಗೆ ಸಲ್ಲಿಸಬಹುದು. ಈ ಅವಧಿ ಮುಗಿದ ನಂತರ ಸಲ್ಲಿಸಲ್ಪಡುವ ಆಕ್ಷೇಪಣೆ : ಅಹವಾಲುಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟರಸಪ್ಪ**

ಪಿ.ಆರ್. 214 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಬಿ).

## ನಗರಾಭಿವೃದ್ಧಿ ಸಚಿವಾಲಯ

**ಸುತ್ತೋಲೆ ಸಂಖ್ಯೆ: ನಅಇ 12 ಬೆಂರೂಪ್ರಾ 2004, ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2004**

**ವಿಷಯ:** ಸರ್ಕಾರದಿಂದ ತಾತ್ಕಾಲಿಕವಾಗಿ ಅನುಮೋದಿಸಿರುವ ಸ್ಥೂಲಾಭಿವೃದ್ಧಿ : ವ್ಯಾಪಕಾಭಿವೃದ್ಧಿ : ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯ ನಕ್ಷೆಯನ್ನು ನೀಡುವ ಬಗ್ಗೆ.

ವಿಷಯಕ್ಕೆ ಸಂಬಂಧಿಸಿದಂತೆ, ಕೆಲವೊಂದು ನಗರಾಭಿವೃದ್ಧಿ ಪ್ರಾಧಿಕಾರಗಳು : ಪುರಸಭೆ ಯೋಜನಾ ಪ್ರಾಧಿಕಾರಗಳು ಸರ್ಕಾರದಿಂದ ತಾತ್ಕಾಲಿಕ ಅನುಮೋದನೆಗೊಂಡಿರುವ ಸ್ಥೂಲಾಭಿವೃದ್ಧಿ : ವ್ಯಾಪಕಾಭಿವೃದ್ಧಿ : ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯ ನಕ್ಷೆಯ ಯಥಾ ಪ್ರತಿಯನ್ನು ಸಾರ್ವಜನಿಕರಿಗೆ ಕೋರಿಕೆ ಮೇರೆಗೆ ನೀಡಬಹುದೇ ಎಂಬುದರ ಬಗ್ಗೆ ಸ್ಪಷ್ಟೀಕರಣ ಕೋರುತ್ತಿರುವುದರಿಂದ ಈ ಕೆಳಕಂಡ ಸ್ಪಷ್ಟೀಕರಣ ನೀಡಲಾಗಿದೆ.

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರನ್ವಯ ಸರ್ಕಾರದಿಂದ ತಾತ್ಕಾಲಿಕವಾಗಿ ಅನುಮೋದನೆ ಗೊಂಡಿರುವ ಸ್ಥೂಲಾಭಿವೃದ್ಧಿ : ವ್ಯಾಪಕಾಭಿವೃದ್ಧಿ ಯೋಜನೆಯ ಬಗ್ಗೆ ಸಾರ್ವಜನಿಕರ ಅಭಿಪ್ರಾಯ ಪಡೆಯಲು ಸಾರ್ವಜನಿಕ ಪ್ರಕಟಣೆ ಹೊರಡಿಸುವುದು ಕಡ್ಡಾಯವಾಗಿರುತ್ತದೆ ಹಾಗೂ ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ರ ನಿಯಮ 4(2) ರಲ್ಲಿ ವಿವರಿಸಿರುವಂತೆ ಮಾಹಿತಿ ನಿರಾಕರಿಸಬಹುದಾದ ಪ್ರಕರಣಗಳ ವ್ಯಾಪ್ತಿಗೊಳಪಡದೇ ಇರುವುದರಿಂದ ನಿಯಮ 4(1) ರನ್ವಯ ನಕ್ಷೆಯ ಪ್ರತಿಯನ್ನು ನೀಡಬಹುದಾಗಿದೆ.

ಆದ್ದರಿಂದ, ಸಾರ್ವಜನಿಕರು ತಾತ್ಕಾಲಿಕವಾಗಿ ಅನುಮೋದನೆಗೊಂಡಿರುವ ಸ್ಥೂಲಾಭಿವೃದ್ಧಿ ಯೋಜನೆ : ವ್ಯಾಪಕಾಭಿವೃದ್ಧಿ ಯೋಜನೆ : ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯ ನಕ್ಷೆಯ ಪ್ರತಿಯನ್ನು ಕೋರಿದಾಗ, ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000ದ ಪ್ರಕರಣ (4) ರನ್ವಯ ಸದರಿ ನಕ್ಷೆಗೆ ತಗಲುವ ವೆಚ್ಚವನ್ನು ಪಾವತಿಸಿಕೊಂಡು ಯಥಾಪ್ರತಿಯನ್ನು ನೀಡಬಹುದು.

ವಿ. ಶ್ರೀಧರಮೂರ್ತಿ

ಪಿ.ಆರ್. 215 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## FOREST, ECOLOGY AND ENVIRONMENT SECRETARIAT

**Subject:** Diversion of 4.73 ha. of forest land for establishment of 6.25 MW Wind Power Project in favour of M/s Suzlon Energy Limited - reg.

**Read:**
1) Letter No.A5 (5) GFL. Wind Farm.SIL/02-03, dated: 25.4.2003, 3.2.2004 of Principal Chief Conservator of Forests, Bangalore.
2) State Government letter No.FEE 288 FGL 2002, dated: 20.6.2003, 5.1.2004, and 6.2.2004.
3) Letter No. F©A/11.2/261/KAR/Misc, dated: 29.12.2003 and 12.2.04 of Government of India, Ministry of Environment and Forests, Regional Office (South Zone), Bangalore.

**PREAMBLE:**

The Principal Chief Conservator of Forests, Bangalore vide his letter dated: 25.4.2003 read at (1) above has submitted the proposal to obtain the approval of Government of India under Section 2 of under Forest (Conservation) Act, 1980 for diversion of 4.73 ha. of forest land for setting up of 6.25 MW Wind Power Project at Sy.No.33 of Chitradurga Kasaba Village in Jogimatti Hill Range in favour of M/s Suzlon Energy Limited, Bangalore subject to certain conditions.

Accordingly State Government was recommended the proposal to Government of India for approval under Section 2 of Forest (Conservation) Act, 1980 vide letter dated: 20.6.2003 read at (2) above.

Government of India, Ministry of Environment and Forests, Regional Office, South Zone, Bangalore in their letter dated: 29.12.2003 read at (3) above has conveyed its Stage-I approval subject to fulfillment of certain conditions. The same has been communicated to Principal Chief Conservator of Forests, Bangalore vide State Government letter dated: 5.1.2004 read at (2) above and Principal Chief Conservator of Forests, Bangalore has furnished the compliance report vide their letter dated: 3.2.2004 read at (1) above. The same has been communicated to Government of India vide State Government letter dated: 6.2.2004 read at (2) above.

Government of India Ministry of Environment and Forests, Regional Office, South Zone, Bangalore vide their letter dated: 12.2.2004 has conveyed its Stage-2 approvel in accordance with Section 2 of Forest (Conservation) Act, 1980 for diversion of 4.73 ha. of forest land for setting up of 6.25 MW Wind Power Project at Sy.No.33 of Chitradurga Kasaba Village of Chitradurga Taluk in Jogimatti Hill Range in favour of M/s Suzlon Energy Limited, Bangalore in Chitradurga District subject to certain conditions.

The proposal has been examined in detail and hence the orders.

**GOVERNMENT ORDER NO. FEE 288 FGL 2002, BANGALORE, DATED: 19th February 2004**

In the Circumstances explained in the preamble above Government are pleased to accord diversion of 4.73 ha. of forest land for setting up of 6.25 MW Wind Power Project at Sy.No.33 of Chitradurga Kasaba Village of Chitradurga Taluk in Jogimatti Hill Range in Chitradurga District in favour of M/s Suzlon Energy Limited, Bangalore subject to the following conditions:

1. The legal Status of the forest land shall remain unchanged.
2. The lessee shall pay the lease rent as fixed by the Government from time to time.
3. The lease period is for 30 years in the first instance.
4. The Compensatory Afforestation shall be raised over equivalent area of identified non-forest land at the cost of user agency.
5. The mutated forest land shall be declared as protected forest/reserve forest within six months and the copy of the original notification shall be furnished to Central Government by the Nodal Officer.
6. The road proposed to be constructed shall be executed in such a way so that the minimum damage to the hard soil is there and proper SMC works to be taken up to reduce soil and water erosion.
7. The total forest area utilized for the project shall not exceed 4.73 ha. In case the land is not used for the stipulated purpose with in one year or when it no longer needed for the stipulated purpose, then the area will be resumed by the forest department. No residential buildings shall be permitted in the proposed area.
8. The Wind Energy farm should be located at a safe distance (1 Km. or more) from the areas like National Parks and Sanctuaries, area of outstanding natural beauty, natural heritage sites of Archeological importance, sites of special scientiffic interests and other important landscapes.
9. The vane tips of the wind turbine shall be painted with orange colour to avoid bird hits. The location of the wind mill shall be such that it does not stand in the migratory path of the birds and is not near the breeding sites of the migratory birds.
10. The distance of the wind mill turbines from the highways, villages and habitations etc., shall be at least 1 KM.
11. In case the user agency proposes to sub lease in favour of developers, it shall be done within a period of 4 years from the date of issue of this approval. In case the developers fail to develop wind farms, the land shall be reverted back to forest department without any compensation.
12. A lease rent of Rs.30,000.00 per MW for the period of lease in addition to the compensatory afforestation, Net Present Value etc., shall be charged from the user agency. This amount shall be utilized in providing gas connection to the local villagers under the Joint Forest Management Programme and for other conservation measures. This amount shall be deposited with compensatory afforestation management and planning agency.
13. The intervening areas between two wind mill footprints shall be planted up with dwarf tree species at the project cost. The State Government shall also consider developing medicinal plants, gardens in available gaps in Wind Farms with possible help from National Medicinal Plants Boards at user agency's cost.
14. Soil and moisture conservation measures like contour trenching shall be taken up on the hillocks supporting the wind mill at the cost of user agency.
15. Adequate fire protection measures, including employment of fire watchers and maintenance of fire lines etc., shall be undertaken by the user agency in the project area at its own cost.
16. The Karnataka Forest Act and Karnataka Forest Rules will be applicable for any violation.
17. Any other condition to be stipulated by Government of India/State Government/Principal Chief Conservator of Forests, Karnataka in the interest of conservation of forests.

By Order and in the Name of the Governor of Karnataka,

**K.N. GAYATHRI**

PR-217

Under Secretary to Government,
Forest, Ecology and Environment Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 31 ಸಸಿವಿ 2001, ದಿನಾಂಕ: 24.8.2001.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 57 ಸಸಿವಿ 2002, ದಿನಾಂಕ: 21.10.2002.

3) ಅಧಿಸೂಚನೆ ಸಂಖ್ಯೆ: ಸಿಆಸುಇ 57 ಸಸಿವಿ 2002, ದಿನಾಂಕ: 21.10.2002
4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 80 ಸಸಿವಿ 2003, ದಿನಾಂಕ: 23.10.2003
5) ಅಧಿಸೂಚನೆ ಸಂಖ್ಯೆ: ಸಿಆಸುಇ 80 ಸಸಿವಿ 2003, ದಿನಾಂಕ: 23.10.2003
6) ಶಿಕ್ಷಣ ಇಲಾಖೆಯ ಕಡತ ಸಂಖ್ಯೆ: ಇಡಿ 36 ಡಿಪಿಐ 2001 (ಭಾಗ).

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಎಂದು ಮರು ಪದನಾಮೀಕರಿಸಿ ಈ ಹುದ್ದೆಯನ್ನು ದಿನಾಂಕ: 20.9.2002 ರಿಂದ 19.9.2003 ರವರೆಗೆ ಮುಂದುವರೆಸುವ ಬಗ್ಗೆ ಆದೇಶವನ್ನು ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 21.10.2002ರ ಸರ್ಕಾರಿ ಆದೇಶದಲ್ಲಿ ಹೊರಡಿಸಲಾಗಿರುತ್ತದೆ ಹಾಗೂ ಈ ಹುದ್ದೆಯಲ್ಲಿ ಶ್ರೀ ಕೆ. ಶ್ರೀಕಂಠೇಶ್ವರ್, ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರನ್ನು ನಿಯೋಜನೆಯ ಮೇರೆಗೆ ಮುಂದುವರೆಸುವ ಬಗ್ಗೆ ಆದೇಶವನ್ನು ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 21.10.2002ರ ಅಧಿಸೂಚನೆಯಲ್ಲಿ ಹೊರಡಿಸಲಾಗಿರುತ್ತದೆ.

ಪ್ರಸ್ತುತ ಶಿಕ್ಷಣ ಇಲಾಖೆಯು ಕ್ರಮ ಸಂಖ್ಯೆ: (4) ರಲ್ಲಿ ಓದಲಾದ ದಿನಾಂಕ: 23.10.2003ರ ಸರ್ಕಾರದ ಆದೇಶದಲ್ಲಿ ಈ ಹುದ್ದೆಯನ್ನು ದಿನಾಂಕ: 31.3.2004 ರವರೆಗೆ ಮುಂದುವರೆಸಲಾಗಿರುತ್ತದೆ. ಪ್ರಸ್ತುತ ಈ ಹುದ್ದೆಯನ್ನು ದಿನಾಂಕ: 1.4.2004 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 92 ಸಸಿವಿ 2003, ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 1.4.2004 ರಿಂದ 31.12.2004 ರವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 218

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ಹಿಂದುಳಿದ ವರ್ಗಗಳ ಆಯುಕ್ತರ ಹುದ್ದೆಯಲ್ಲಿ ಶ್ರೀಯುತ ಬಿ. ಬಸವರಾಜ್‌ರವರನ್ನು ಮುಂದುವರೆಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 58 ಎಸ್ಎಎಸ್ 2004, ದಿನಾಂಕ: 31.1.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 31.1.2004ರ ಸರ್ಕಾರಿ ಅಧಿಸೂಚನೆಯಲ್ಲಿ ಶ್ರೀ ಬಿ. ಬಸವರಾಜ್, ಭಾ.ಆ.ಸೇ. ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ ಇವರನ್ನು ಮಹಿಳಾ ವಿಶ್ವವಿದ್ಯಾನಿಲಯ, ಬಿಜಾಪುರಕ್ಕೆ ಸೂಪರ್ ಟೈಮ್ ಸ್ಕೇಲ್ ದರ್ಜೆಗೆ ಬಡ್ತಿ ನೀಡಿ ವರ್ಗಾಯಿಸಿರುವ ಅಧಿಸೂಚನೆಯನ್ನು ಸರ್ಕಾರವು ಹಿಂದಕ್ಕೆ ಪಡೆದು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಕೇಡರ್ ಹುದ್ದೆಯಾದ ನಿರ್ದೇಶಕರ ಹುದ್ದೆಯನ್ನು ತಾತ್ಕಾಲಿಕವಾಗಿ ಅಬೆಯನ್ಸ್ (Abeyance) ನಲ್ಲಿರಿಸಿ ಸದರಿಯವರನ್ನು ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರ ಹುದ್ದೆಗೆ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಹಾಲಿ ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಹಿಂದುಳಿದ ವರ್ಗಗಳ ಇಲಾಖಾ ನಿರ್ದೇಶಕರ ಹುದ್ದೆಯಲ್ಲಿ ಹಿರಿಯ ವೇತನ ಶ್ರೇಣಿಯ ಐಎಎಸ್ ಅಧಿಕಾರಿಯನ್ನು ನೇಮಿಸುವ ಮೂಲಕ ತುಂಬಬಹುದಾಗಿದೆ.

ಆದ್ದರಿಂದ ಶ್ರೀಯುತ ಬಿ. ಬಸವರಾಜ್‌ರವರನ್ನು ಸೂಪರ್ ಟೈಂ ಸ್ಕೇಲ್ ಕಾಲಿಕ ವೇತನ ಶ್ರೇಣಿ ರೂ.18,400-500-22,400 ಹುದ್ದೆಗೆ ನೇಮಕ ಮಾಡಿದ್ದು, ಸದರಿ ಅಧಿಕಾರಿಯು ದಿನಾಂಕ: 31.1.2004 ರಂದು ಅಪರಾಹ್ನ ಸೇವೆಗೆ ಹಾಜರಾಗಿರುವರು. ಸದರಿ ಅಧಿಕಾರಿಯು ಸೂಪರ್ ಟೈಂ ವೇತನ ಶ್ರೇಣಿಯಲ್ಲಿ 18,400-500-22,400 ಇದರಲ್ಲಿ ವೇತನ ಪಡೆಯಲು ಅನುಕೂಲವಾಗುವಂತೆ ಆಡಳಿತ ಇಲಾಖೆಯು ವಿಷಯವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆಡಳಿತಾತ್ಮಕ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 41 ಬಿಇಟಿ 2004, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ತಿಳಿಯಪಡಿಸಲಾದ ಅಂಶಗಳನ್ನು ಸರ್ಕಾರ ಪರಿಶೀಲಿಸಿ, ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 58 ಎಸ್ಎಎಸ್ 2004, ದಿನಾಂಕ: 31.1.2004ರ ಅಧಿಸೂಚನೆಯಲ್ಲಿ ಶ್ರೀಯುತ ಬಿ. ಬಸವರಾಜ್, ಐಎಎಸ್ ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ ಇವರನ್ನು ಬಿಜಾಪುರ ಮಹಿಳಾ ವಿಶ್ವವಿದ್ಯಾಲಯಕ್ಕೆ ರಿಜಿಸ್ಟ್ರಾರ್ ಹುದ್ದೆಗೆ ಮುಂಬಡ್ತಿ ನೀಡಿ ವರ್ಗಾಯಿಸಿರುವ ಆದೇಶವನ್ನು ಸರ್ಕಾರವು ಹಿಂದಕ್ಕೆ ಪಡೆದು ಹಿಂದುಳಿದ ವರ್ಗಗಳ ಇಲಾಖೆಯ ಆಯುಕ್ತರ ಸೂಪರ್ ಟೈಂ ಸ್ಕೇಲ್ ಅಂದರೆ ವೇತನ ಶ್ರೇಣಿ 18,400-500-22,400 ಹುದ್ದೆಗೆ ನೇಮಿಸಿದ್ದು, ಅಧಿಕಾರಿಯು ಸದರಿ ಹುದ್ದೆಯ ಕಾರ್ಯಭಾರವನ್ನು ದಿನಾಂಕ: 31.1.2004 ರಂದು

ಅಪರಾಹ್ನ ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಸದರಿ ಅಧಿಕಾರಿಯು ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರಾಗಿ ಮುಂದುವರೆಯುವವರೆವಿಗೆ ಸೂಪರ್ ಟೈಂ ಸ್ಕೇಲ್ ವೇತನ ಪಡೆಯಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮರುಳಸಿದ್ದಯ್ಯ**

ಪಿ.ಆರ್. 219 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/NSL/2003/219, ದಿನಾಂಕ: 5/6.2.2004.

2) ದಿನಾಂಕ: 6.2.2004 ರಂದು ನಡೆದ ಹಂಚಿಕೆ ಸಮಿತಿಯ ಸಭೆಯ; ನಡವಳಿಗಳು.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ನುಜಿವೀಡು ಸೀಡ್ಸ್ ಲಿಮಿಟೆಡ್, ಸಿಕಂದರಾಬಾದ್, ಈ ಕಂಪೆನಿಗೆ ದಾವಣಗೆರೆ, ಕೋಲಾರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ 49 ಮೆಗಾವಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲಿನ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 6.2.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯು ಅನುಮೋದಿಸಿರುತ್ತದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 58 ಎನ್‌ಸಿಇ 2004, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ನುಜಿವೀಡು ಸೀಡ್ಸ್ ಲಿಮಿಟೆಡ್, ಸಿಕಂದರಾಬಾದ್, ಈ ಕಂಪೆನಿಗೆ ದಾವಣಗೆರೆ, ಕೋಲಾರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ 49 ಮೆಗಾವಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗಿನ ಅನುಬಂಧದಲ್ಲಿ ವಿವರಿಸಿದಂತೆ ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

**GEOGRAPHICAL AREA DETAILS OF 49 MW WIND POWER PROJECT OF M/S NUZIVEEDU SEEDS LIMITED**

| SL. NO. | TALUK AND DISTRICT | DESCRIPTION OF AREA | CAPACITY IN MW |
|---|---|---|---|
| 1. | Juglur Davangere District | A ridges with 744 meter peak is in Jagalur SF located on the North west south east of Linganahalli village | 6 |
| 2. | Juglur Davangere District | Group of ridges with peak 796 M & 803 M in Ranganayanadurga SF located on the east of Gode village, Tarehalli and west of Kelagate. | 9 |
| 3. | Bangarpet Kolar District | Four ridges oriented in Northsouth directions, situated near by Velagmadi, Dod betta near Bodgurki area of Ramasagara Ukkarahalli SF & Batlur area of Kamsandra Rf. | 12 |
| 4. | Bagalkot Bagalkot District | Three ridges, two oriented in North-East, South-West, East-West and North-West, South-East and are located near Rampur, Achanur, Kadlimatti, Sangondi, Kirsur & Malapur villages. | 22 |
| | | **TOTAL** | 49 |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾವಾಟ್ ಒಂದಕ್ಕೆ ರೂ.೨೫,೦೦೦ ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ ೧೦ ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ

ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ಆಗಿ ನಕ್ಷೆ ಮತ್ತು ವಿಂಡ್ ಫಾರ್ಮ್‌ನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾವಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿಲೋ ವ್ಯಾಟ್ ನಿಂದ 300 ಕಿಲೋವ್ಯಾಟ್ | 18 | 1 |
| > 300 ಕಿಲೋವ್ಯಾಟ್ ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ / ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 220 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಹೆಚ್.ಆರ್. ಪುಟ್ಟರಾಜು, ನಿವೃತ್ತ ಅಪರ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ವಿರುದ್ಧ ಇಲಾಖಾ ವಿಚಾರಣೆ - ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಕ್ರಮಾಂಕ: ಸಿಆಸುಇ 123 ಎಸ್‌ಇಎನ್ 2002, ದಿನಾಂಕ: 22.07.2003.

2) ಶ್ರೀ ಹೆಚ್.ಆರ್. ಪುಟ್ಟರಾಜು, ನಿವೃತ್ತ ಅಪರ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ಉತ್ತರ ದಿನಾಂಕ: 22.08.2003.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಸರ್ಕಾರದ ಉಪ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಕಾರ್ಮಿಕ ರಾಜ್ಯ ವಿಮಾ ಇಲಾಖೆಯಲ್ಲಿನ ಡಾ: ಸದಾನಂದ ಎಲ್. ಕರ್ಕಿ, ಕಾರ್ಮಿಕ ವಿಮಾ ಯೋಜನೆ (ವೈ) ಸೇವೆ ಅವರು ಸ್ಥಳೀಯ ಅಭ್ಯರ್ಥಿಯಾಗಿ ಸಲ್ಲಿಸಿದ ಹಾಗೂ ಸ್ನಾತಕೋತ್ತರ ವ್ಯಾಸಂಗದ ಅವಧಿ ಹಾಗೂ ಸ್ನಾತಕೋತ್ತರ ವ್ಯಾಸಂಗ ಮುಗಿದ ನಂತರ ದಿನಾಂಕ: 02.08.1985 ರಿಂದ 10.06.1986ರ ವರೆಗಿನ ಅವಧಿಯನ್ನು ಸಕ್ರಮಗೊಳಿಸಲು ಕಾರಣರಾದ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ 12 ರನ್ವಯ ಶ್ರೀ ಹೆಚ್.ಆರ್. ಪುಟ್ಟರಾಜು ನಿವೃತ್ತ ಅಪರ ಕಾರ್ಯದರ್ಶಿ,

ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ದಿನಾಂಕ: 22.07.2003ರ ನೋಟೀಸ್ ನೀಡಿ ಸಮಜಾಯಿಷಿಯನ್ನು ಕೇಳುವ ಮೂಲಕ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಆರೋಪಿತ ಅಧಿಕಾರಿಯವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 22.08.2003ರ ಪ್ರತಿ ಹೇಳಿಕೆ ಸಲ್ಲಿಸಿ ಮೊದಲಿಗೆ ವೈದ್ಯಾಧಿಕಾರಿಯ ಕೋರಿಕೆಯನ್ನು ತಿರಸ್ಕರಿಸಲಾಗಿತ್ತು ಹಾಗೂ ಅನಂತರ ಅಂದಿನ ಕಾರ್ಮಿಕ ಇಲಾಖೆ ಕಾರ್ಯದರ್ಶಿಯವರ ನಿರ್ದೇಶನದ ಮೇಲೆ ಪ್ರಕರಣವನ್ನು ಮರುಪರಿಶೀಲಿಸಿ ಅವರ ಆದೇಶವನ್ನು ಪಡೆದು ನಂತರವೇ ಕ್ರಮಬದ್ಧಗೊಳಿಸುವ ಆದೇಶವನ್ನು ಹೊರಡಿಸಲಾಗಿದೆ. ಡಾ: ಸದಾನಂದ ಎಲ್. ಕರ್ಕಿಯವರಿಗೆ ನೀಡಿದ ಸೇವಾ ಸವಲತ್ತುಗಳನ್ನು ಹಿಂದಕ್ಕೆ ಪಡೆದು ಪಾವತಿಸಲಾದ ವೇತನ ಭತ್ಯೆಗಳನ್ನು ವೈದ್ಯಾಧಿಕಾರಿಗಳಿಂದ ವಸೂಲು ಮಾಡಲು ಆದೇಶಿಸಿರುವುದರಿಂದ ಈ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲ. ಆದ್ದರಿಂದ ತಾವು ಯಾವುದೇ ದುರ್ನಡತೆ ಎಸಗಿಲ್ಲವೆಂದು ತಿಳಿಸಿ ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿದ್ದರು. ನಿವೃತ್ತ ಅಧಿಕಾರಿಯ ಉತ್ತರವನ್ನು ಒಪ್ಪಿಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 123 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಹೆಚ್.ಆರ್. ಪುಟ್ಟರಾಜು, ನಿವೃತ್ತ ಅಪರ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರನ್ನು ದಿನಾಂಕ: 22.07.2003ರ ನೋಟೀಸ್‌ನಲ್ಲಿ ಮಾಡಲಾದ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸುತ್ತದೆ. ಪ್ರಸ್ತುತ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 221

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಜಕ್ಕೂರಿನಲ್ಲಿ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯವರ ವಶದಲ್ಲಿರುವ 10 ಎಕರೆ ಜಮೀನನ್ನು ಕರ್ನಾಟಕ ಭೂಸೇನಾ ನಿಗಮಕ್ಕೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ** ಕೆಎಲ್ಎಸಿ/ಎಡಿಎಂ/ಎಂ.ಎಸ್/138/2003-04, ದಿನಾಂಕ: 22.12.2003.

**ಪ್ರಸ್ತಾವನೆ:**

ಉಲ್ಲೇಖಿತ ಪತ್ರದಲ್ಲಿ ಕರ್ನಾಟಕ ಭೂ ಸೇನಾ ನಿಗಮ ನಿಯಮಿತ ರವರು ಜಕ್ಕೂರಿನಲ್ಲಿ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಶದಲ್ಲಿರುವ 20 ಎಕರೆ ಜಮೀನಿನ ಪೈಕಿ 10 ಎಕರೆ ಜಮೀನನ್ನು ಸದರಿ ಸಂಸ್ಥೆಯ ಉಪಯೋಗಕ್ಕಾಗಿ ಮಂಜೂರು ಮಾಡಲು ಕೋರಿರುತ್ತಾರೆ. ಈ ಬಗ್ಗೆ ಸರ್ಕಾರ 5 ಎಕರೆ ಜಮೀನನ್ನು ಕರ್ನಾಟಕ ಭೂಸೇನಾ ನಿಗಮಕ್ಕೆ ಮಂಜೂರು ಮಾಡಲು ತೀರ್ಮಾನಿಸಿರುವ ಪ್ರಯುಕ್ತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 3 ಗ್ರಾಇಂಕಾ 2004, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಕರ್ನಾಟಕ ಭೂ ಸೇನಾ ನಿಗಮದ ಕಛೇರಿಗಳಿಗಾಗಿ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಅಧೀನದಲ್ಲಿರುವ ಮಹಾತ್ಮಗಾಂಧಿ ಗ್ರಾಮೀಣ ಇಂಧನ ಮತ್ತು ಅಭಿವೃದ್ಧಿ ಸಂಸ್ಥೆ, ಜಕ್ಕೂರು ರವರ ವಶದಲ್ಲಿರುವ ಸರ್ವೆ ನಂ: 82 ಜಕ್ಕೂರು ಗ್ರಾಮ, ಯಲಹಂಕ ಹೋಬಳಿಯಲ್ಲಿ 20 ಎಕರೆ ಜಮೀನಿನ ಪೈಕಿ 5 ಎಕರೆ ಜಮೀನನ್ನು ಕರ್ನಾಟಕ ಭೂ ಸೇನಾ ನಿಗಮಕ್ಕೆ ಮಂಜೂರು ಮಾಡಿದೆ.

ನಿರ್ದೇಶಕರು, ಮಹಾತ್ಮಗಾಂಧಿ ಗ್ರಾಮೀಣ ಇಂಧನ ಮತ್ತು ಅಭಿವೃದ್ಧಿ ಸಂಸ್ಥೆ, ಜಕ್ಕೂರು, ಬೆಂಗಳೂರು ರವರು ಕೂಡಲೇ 5 ಎಕರೆ ಜಮೀನನ್ನು ಕರ್ನಾಟಕ ಭೂ ಸೇನಾ ನಿಗಮಕ್ಕೆ ಹಸ್ತಾಂತರಿಸಲು ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಜಿ. ವಿಜಯ ಕುಮಾರ್**

ಪಿ.ಆರ್. 222

ನಿರ್ದೇಶಕರು (ಗ್ರಾಇಂಕಾ) ಹಾಗೂ ಪದನಿಮಿತ್ತ ಸರ್ಕಾರದ ಪದನಿಮಿತ್ತ ಉಪಕಾರ್ಯದರ್ಶಿ,

ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯಲ್ಲಿ ಸರ್ಕಾರದ ಕಾರ್ಯದರ್ಶಿ (ಬರ ಪರಿಹಾರ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಡಿಪಿಎಆರ್ 411 ಎಸ್ಎಎಸ್ 2003, ದಿನಾಂಕ: 12.1.2004.

**ಪ್ರಸ್ತಾವನೆ:**

ಅಧಿಸೂಚನೆ ಸಂಖ್ಯೆ: ಡಿಪಿಎಆರ್ 411 ಎಸ್ಎಎಸ್ 2003, ದಿನಾಂಕ: 12.1.2004 ರಲ್ಲಿ ಶ್ರೀಮತಿ ಎಂ.ವಿ. ಜಯಂತಿ, ಐ.ಎ.ಎಸ್. ಇವರಿಗೆ ಐ.ಎ.ಎಸ್.ನ ಸೂಪರ್ ಟೈಂ ವೇತನ ಶ್ರೇಣಿ ರೂ.18400-500-22400ಗೆ ಬಡ್ತಿ ನೀಡಿ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಕಾರ್ಯದರ್ಶಿ (ಬರ ಪರಿಹಾರ) ಕಂದಾಯ ಇಲಾಖೆ ಇಲ್ಲಿ ಹೊಸದಾಗಿ ಸೃಜಿಸಲಾದ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಈ ಕಾರಣದಿಂದಾಗಿ ಕಂದಾಯ ಇಲಾಖೆಯಲ್ಲಿ ಸರ್ಕಾರದ ಕಾರ್ಯದರ್ಶಿ (ಬರ ಪರಿಹಾರ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 4 ಸಸಿವಿ 2004, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯಲ್ಲಿ ಸರ್ಕಾರದ ಕಾರ್ಯದರ್ಶಿ (ಬರ ಪರಿಹಾರ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ - ಶ್ರೀಮತಿ ಎಂ.ವಿ. ಜಯಂತಿ, ಐ.ಎ.ಎಸ್. ಇವರು ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಪತ್ರಾಂಕಿತ ಆಪ್ತಸಹಾಯಕ : ಹಿರಿಯ ಶೀಘ್ರಲಿಪಿಗಾರ | 2 ಹುದ್ದೆಗಳು |
| 2. | ಶಾಖಾಧಿಕಾರಿ : ಹಿರಿಯ ಸಹಾಯಕ | 1 ಹುದ್ದೆ |
| 3. | ಕಿರಿಯ ಸಹಾಯಕ | 1 ಹುದ್ದೆ |
| 4. | ವಾಹನ ಚಾಲಕ | 1 ಹುದ್ದೆ |
| 5. | ದಲಾಯತ್ | 2 ಹುದ್ದೆಗಳು |
| | ಒಟ್ಟು | 7 ಹುದ್ದೆಗಳು |

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 122:ವೆಚ್ಚ-5:2004, ದಿನಾಂಕ: 11.2.2004 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 223

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ಆರ್ಥಿಕ ಸಚಿವಾಲಯ**

**ವಿಷಯ:** ಮೀನುಗಾರಿಕೆ ಕ್ಷೇತ್ರಪಾಲಕರಿಗೆ ಹೆಚ್ಚುವರಿ ವೇತನ ಬಡ್ತಿ ಮಂಜೂರಾತಿ-ಕನ್ನಡ ಭಾಷಾ ಪರೀಕ್ಷೆ ಮತ್ತು ಇಲಾಖಾ ಪರೀಕ್ಷೆ ಉತ್ತೀರ್ಣತೆಯಿಂದ ವಿನಾಯಿತಿ ನೀಡುವ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2002, ದಿನಾಂಕ: 9.5.2002.

**ಪ್ರಸ್ತಾವನೆ:**

ರಾಜ್ಯ ವೇತನ ಶ್ರೇಣಿಗಳ ಮೊದಲ ಹನ್ನೊಂದು ವೇತನ ಶ್ರೇಣಿಗಳಲ್ಲಿ ಯಾವುದೇ ಒಂದು ಹುದ್ದೆಯಲ್ಲಿ 20 ವರ್ಷಗಳ ಅವಧಿಯಲ್ಲಿ ಪದೋನ್ನತಿಗೆ ಅರ್ಹತೆ ಇದ್ದರೂ ಸಹ ಒಂದೂ ಪದೋನ್ನತಿ ಪಡೆಯದೆ ಮುಂದುವರೆದಿರುವ ಅಥವಾ ಮುಂದುವರೆಯುವ ಸರ್ಕಾರಿ ನೌಕರರಿಗೆ ಆ ಹುದ್ದೆಗೆ ನಿಗದಿಪಡಿಸಲಾದ ವೇತನ ಶ್ರೇಣಿಯಲ್ಲಿ ಅಥವಾ ಅವನು ಹೊಂದಿರುವ ಆಯ್ಕೆ ಕಾಲಿಕ ವೇತನ ಶ್ರೇಣಿಯಲ್ಲಿ ಅಥವಾ ಹಿರಿಯ ವೇತನ ಶ್ರೇಣಿಯಲ್ಲಿ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ದಿನಾಂಕ: 1.4.2002 ರಿಂದ ಅಥವಾ 20 ವರ್ಷಗಳ ಸೇವೆ ಪೂರ್ಣಗೊಳಿಸುವ ದಿನಾಂಕದಿಂದ ಮಂಜೂರು ಮಾಡಲು ಮೇಲೆ ಓದಲಾದ ದಿನಾಂಕ: 9.5.2002ರ ಆದೇಶದಲ್ಲಿ ಆದೇಶಿಸಿರುತ್ತದೆ. ಹೆಚ್ಚುವರಿ ವೇತನ ಬಡ್ತಿಯ ಮಂಜೂರಾತಿ ಉದ್ದೇಶಕ್ಕಾಗಿ ಸರ್ಕಾರಿ ನೌಕರನು ಇತರೆ ಷರತ್ತುಗಳೊಂದಿಗೆ ಬಡ್ತಿಗೆ ನಿಗದಿಪಡಿಸಿರುವ ಅರ್ಹತೆಯನ್ನು ಹೊಂದಿರಬೇಕಾಗಿರುತ್ತದೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ಉನ್ನತ ಹುದ್ದೆಗೆ ಬಡ್ತಿ ಹೊಂದಲು ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳು ಅಥವಾ ಇತರೆ ಯಾವುದೇ ಪರೀಕ್ಷೆಗಳಲ್ಲಿ ಸಹ ಸರ್ಕಾರಿ ನೌಕರನು ಉತ್ತೀರ್ಣರಾಗಿರಲೇಬೇಕಾಗುತ್ತದೆ. ಆದರೆ, ಕೆಲವು ವರ್ಗದ ಸರ್ಕಾರಿ ನೌಕರರಿಗೆ ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡುವ ಉದ್ದೇಶಕ್ಕಾಗಿ ಕನ್ನಡ ಭಾಷಾ ಪರೀಕ್ಷೆ ಮತ್ತು ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರಲೇಬೇಕೆಂಬ ನಿಬಂಧನೆಯಿಂದ ವಿನಾಯಿತಿ ನೀಡಲಾಗಿರುತ್ತದೆ.

ಮೀನುಗಾರಿಕೆ ಇಲಾಖೆಯ ಮೀನುಗಾರಿಕೆ ಕ್ಷೇತ್ರಪಾಲಕರುಗಳ ಹುದ್ದೆಯ ನೇಮಕಾತಿಗೆ ಏಳನೇ ತರಗತಿಯಲ್ಲಿ ಉತ್ತೀರ್ಣತೆಯನ್ನು ಕನಿಷ್ಠ ವಿದ್ಯಾರ್ಹತೆಯಾಗಿ ನಿಗದಿಪಡಿಸಲಾಗಿದ್ದು, ಕಡಿಮೆ ವಿದ್ಯಾರ್ಹತೆಯುಳ್ಳ ಈ ನೌಕರನು ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಲು ಅಸಮರ್ಥರಾಗಿರುತ್ತಾರೆ. ವಾರ್ಷಿಕ ವೇತನ ಬಡ್ತಿಗಳಿಸುವ ಉದ್ದೇಶಕ್ಕಾಗಿ ಇವರಿಗೆ ಕನ್ನಡ ಭಾಷಾ ಪರೀಕ್ಷೆ ಉತ್ತೀರ್ಣತೆಯಿಂದ ವಿನಾಯಿತಿ ನೀಡಲಾಗಿರುತ್ತದೆ. ಇದಲ್ಲದೆ ಈ ಹುದ್ದೆಯ ಕಾರ್ಯ ಮತ್ತು ಜವಾಬ್ದಾರಿಗಳು ಪರಿಚಾರಿಕೆ ಸ್ವರೂಪದಾಗಿದ್ದು, ಮೀನುಮರಿ ಉತ್ಪಾದನೆ, ಮೀನು ಪೋಷಣೆ ಮತ್ತು ಮೀನು ಸಾಕಾಣೆ, ಕೆರೆಗಳ ಕಾವಲು, ಉಸ್ತುವಾರಿ ಮುಂತಾದ ಕಾರ್ಯಗಳನ್ನು ಒಳಗೊಂಡಿರುತ್ತದೆ. ಈ ಕಾರಣಗಳಿಂದಾಗಿ ಮೀನುಗಾರಿಕೆ ಇಲಾಖೆಯ ಮೀನುಗಾರಿಕೆ ಕ್ಷೇತ್ರಪಾಲಕರಿಗೆ ಹೆಚ್ಚುವರಿ ವೇತನ ಬಡ್ತಿ ಮಂಜೂರು ಮಾಡುವ ಉದ್ದೇಶಕ್ಕಾಗಿ ಆ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳ ಉತ್ತೀರ್ಣತೆಯಿಂದ ವಿನಾಯಿತಿ ನೀಡುವಂತೆ ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯು ಕೋರಿದೆ. ಸರ್ಕಾರವು ಈ ಕೋರಿಕೆಯನ್ನು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 43 ಎಸ್‌ಆರ್‌ಪಿ 2000, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2004**

ಮೀನುಗಾರಿಕೆ ಇಲಾಖೆಯ ಮೀನುಗಾರಿಕೆ ಕ್ಷೇತ್ರಪಾಲಕರುಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2002, ದಿನಾಂಕ: 9.5.2002ರ ಅನ್ವಯ ಹೆಚ್ಚುವರಿ ವೇತನ ಬಡ್ತಿ ಮಂಜೂರು ಮಾಡುವ ಉದ್ದೇಶಕ್ಕಾಗಿ ಆ ಹುದ್ದೆಗೆ ನಿಗದಿಪಡಿಸಿರುವ ಕನ್ನಡ

ಭಾಷಾ ಪರೀಕ್ಷೆ ಮತ್ತು ಬಡ್ತಿ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳ ಉತ್ತೀರ್ಣತೆಗಾಗಿ ಒತ್ತಾಯಿಸುವ ಅಗತ್ಯವಿಲ್ಲವೆಂದು ಸರ್ಕಾರ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಟಿ. ನಾಯ್ಕ್**

ಪಿ.ಆರ್. 224 ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು-2).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಸೈಯದ್ ಇಸ್ಹಾಕ್ ಅಹಮದ್, ಜಂಟಿ ನಿರ್ದೇಶಕರು, (ನೇಮಕಾತಿ ನಿರೀಕ್ಷೆಯಲ್ಲಿ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ, ಇವರಲ್ಲಿ ದಾಖಲಾಗಿರುವ ಭ್ರಷ್ಟಾಚಾರದ ಆಪಾದನೆಯ ಪ್ರಕರಣದ ತನಿಖೆಯನ್ನು ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್:ಐಎನ್‌ವಿ (ಜಿ):ಸಿಟಿ:ಕ್ರೈಂ.1:2004, ದಿನಾಂಕ: 23.01.2004.

**ಪ್ರಸ್ತಾವನೆ:**

ಶ್ರೀ ಸೈಯದ್ ಇಸ್ಹಾಕ್ ಅಹಮದ್, ಜಂಟಿ ನಿರ್ದೇಶಕರು, (ಹಾಲಿ ನೇಮಕಾತಿ ನಿರೀಕ್ಷೆಯಲ್ಲಿ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಹಿಂದೆ ಕರ್ನಾಟಕ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ, ಬೆಂಗಳೂರು, ಇಲ್ಲಿ ನಿಯೋಜನೆಯ ಮೇಲೆ ಆಡಳಿತಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ, ಸಾಲ ವಸೂಲಾತಿ ಗುತ್ತಿಗೆ ನೀಡುವ ಸಲುವಾಗಿ ಶ್ರೀ ಸೈಯದ್ ಸಮೀವುಲ್ಲಾ, ವಿನೋಬ ನಗರ, ಕೆ.ಜಿ. ಹಳ್ಳಿ, ಪೊಲೀಸ್ ಠಾಣೆ ಹಿಂಭಾಗ, ಬೆಂಗಳೂರು, ಇವರಿಂದ ಲಂಚ ಕೇಳಿದ್ದಾರೆಂಬ ಲಿಖಿತ ದೂರನ್ನು ಆಧರಿಸಿ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಪೊಲೀಸ್ ಠಾಣೆಯಲ್ಲಿ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 7, 13(1) ಡಿ ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ:1/2004ರ ಪ್ರಕಾರ ಪ್ರಕರಣವನ್ನು ದಿನಾಂಕ: 02.01.2004 ರಂದು ದಾಖಲಿಸಿಕೊಂಡು, ಪಂಚ ಸಾಕ್ಷಿಗಳೊಡನೆ ತನಿಖಾಧಿಕಾರಿ ಮತ್ತಿತರೆ ಸಿಬ್ಬಂದಿಯೊಡನೆ ದಿನಾಂಕ: 02.01.2004 ರಂದು ಆರೋಪಿಯ ಕಛೇರಿಯಲ್ಲಿ ಬೀಸಿದ (ಟ್ರ್ಯಾಪ್) ಬಲೆಯಲ್ಲಿ ಸದರಿ ಅಧಿಕಾರಿಯು ಸಿಕ್ಕಿಬಿದ್ದಿರುವುದರಿಂದ ಮೇಲೆ (1) ರಲ್ಲಿ ಓದಲಾದ ದಿನಾಂಕ: 23.01.2004ರ ಪತ್ರದಲ್ಲಿ ಶ್ರೀ ಸೈಯದ್ ಇಸ್ಹಾಕ್ ಅಹಮದ್, ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಬೇಕೆಂದು ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಕರ್ನಾಟಕ ಲೋಕಾಯುಕ್ತ ಕಛೇರಿಯ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 09 ಕೈಸೇವ 2004, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶದ ಹಿನ್ನೆಲೆಯಲ್ಲಿ ಸರ್ಕಾರವು, ಶ್ರೀ ಸೈಯದ್ ಇಸ್ಹಾಕ್ ಅಹಮದ್, ಜಂಟಿ ನಿರ್ದೇಶಕರು, (ನೇಮಕಾತಿ ನಿರೀಕ್ಷೆಯಲ್ಲಿ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ, ಇವರಲ್ಲಿ ದಾಖಲಾಗಿರುವ ಭ್ರಷ್ಟಾಚಾರದ ಆಪಾದನೆಯ ಪ್ರಕರಣದ ತನಿಖೆಯನ್ನು ಕಾಯ್ದಿರಿಸಿ, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10 (1) (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಇವರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಸದರಿ ಅಧಿಕಾರಿಯು ಅಮಾನತ್ತಿನ ಅವಧಿಯಲ್ಲಿ ನಿಯಮಾವಳಿಗಳ ಪ್ರಕಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಈ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡಬಾರದೆಂದೂ ಸಹ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 225 ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕೈಗಾರಿಕಾ ಸೇವೆಗಳು).

## ಕಾನೂನು ಸಚಿವಾಲಯ

**ವಿಷಯ:** ಶ್ರೀ ಎಸ್.ಆರ್. ಗೌತಮ್, ವಕೀಲರು, ಬೆಂಗಳೂರು (ನಗರ) ಇವರನ್ನು ಶ್ರೀ ಉನ್ನಿಕೃಷ್ಣನ್, ನೋಟರಿ ಬೆಂಗಳೂರು (ನಗರ) ಇವರ ವಜಾದಿಂದ ತೆರವಾದ ಬೆಂಗಳೂರು (ನಗರ) ಕಂದಾಯ ತಾಲ್ಲೂಕು ನೋಟರಿ ಹುದ್ದೆಗೆ ನೇಮಕ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 137 ಎಲ್‌ಸಿಎಲ್ 2000, ದಿನಾಂಕ: 13.07.2000.

2) ಸರ್ಕಾರಿ ಪತ್ರ ಸಂಖ್ಯೆ: ಲಾ 108 ಎಲ್‌ಸಿಎಲ್ 2003, ದಿನಾಂಕ: 30.9.2003.

3) ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ನಗರ) ರವರ ಪತ್ರ ಸಂಖ್ಯೆ: ಪಿಪಿಎಸ್ (ಸಿಸಿಸಿ) 08:2004, ದಿನಾಂಕ: 7.2.2004.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 13.7.2000ರ ಸರ್ಕಾರಿ ಆದೇಶದಲ್ಲಿ ಶ್ರೀ ಉನ್ನಿಕೃಷ್ಣನ್, ನೋಟರಿ ಬೆಂಗಳೂರು (ನಗರ) ಇವರನ್ನು ನೋಟರಿ ಹುದ್ದೆಯಿಂದ ಶಾಶ್ವತವಾಗಿ ವಜಾಮಾಡಲಾಗಿದೆ. ಸದರಿ ಹುದ್ದೆಯ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರಿ ಪತ್ರದಲ್ಲಿ ದಿನಾಂಕ: 30.9.2003 ರಲ್ಲಿ ಕೋರಲಾಗಿದೆ.

ಮೇಲೆ ಓದಲಾಗಿರುವ (3) ದಿನಾಂಕ: 7.2.2004ರ ಪತ್ರದಲ್ಲಿ ಪ್ರಧಾನ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ನಗರ) ರವರು ಅರ್ಜಿಯನ್ನು ಆಹ್ವಾನಿಸಿ ನೋಟರಿ ನಿಯಮಾವಳಿ ರೀತ್ಯ ಪರಿಶೀಲಿಸಿ 15 ಜನ ವಕೀಲರುಗಳ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 108 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2004**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಎಸ್.ಆರ್. ಗೌತಮ್, ವಕೀಲರು, ನಂ.527, 17ನೇ ಅಡ್ಡರಸ್ತೆ, 1ನೇ ಬ್ಲಾಕ್, ಆರ್.ಟಿ.ನಗರ, ಬೆಂಗಳೂರು-32 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬೆಂಗಳೂರು (ನಗರ) ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹೆಚ್. ನಾಗೇಂದ್ರಪ್ಪ**

ಪಿ.ಆರ್. 226 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಶ್ರೀ ಎ. ರಘುನಾಥ, ವಕೀಲರು, ಬೆಂಗಳೂರು (ನಗರ) ಇವರನ್ನು ಶ್ರೀ ಪಿ. ಗೋಪಾಲಕೃಷ್ಣ, ನೋಟರಿ ಬೆಂಗಳೂರು (ನಗರ) ಇವರ ವಜಾದಿಂದ ತೆರವಾದ ಬೆಂಗಳೂರು (ನಗರ) ಕಂದಾಯ ತಾಲ್ಲೂಕಿಗೆ ನೋಟರಿಯಾಗಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 316 ಎಲ್‌ಸಿಎಲ್ 2001, ದಿನಾಂಕ: 17.07.2003.
2) ಸರ್ಕಾರಿ ಪತ್ರ ಸಂಖ್ಯೆ: ಲಾ 105 ಎಲ್‌ಸಿಎಲ್ 2003, ದಿನಾಂಕ: 27.8.2003.
3) ಪ್ರಧಾನ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ನಗರ) ರವರ ಪತ್ರ ಸಂಖ್ಯೆ: ಪಿಪಿಎಸ್ (ಸಿಸಿಸಿ) 07:2004, ದಿನಾಂಕ: 7.2.2004.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 17.7.2003ರ ಸರ್ಕಾರಿ ಆದೇಶದಲ್ಲಿ ಶ್ರೀ ಪಿ. ಗೋಪಾಲಕೃಷ್ಣ, ನೋಟರಿ ಬೆಂಗಳೂರು (ನಗರ) ಇವರನ್ನು ನೋಟರಿ ಹುದ್ದೆಯಿಂದ ವಜಾ ಮಾಡಲಾಗಿದೆ. ಮೇಲೆ ಓದಲಾಗಿರುವ ಕ್ರಮಾಂಕ (2) ದಿನಾಂಕ: 27.8.2003ರ ಸರ್ಕಾರಿ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುವಂತೆ ಪ್ರಧಾನ ಸಿವಿಲ್ ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ಕೋರಲಾಗಿದೆ.

ಸದರಿ ನೋಟರಿ ಹುದ್ದೆಗೆ ಮೇಲೆ ಓದಲಾಗಿರುವ (3) ದಿನಾಂಕ: 7.2.2004ರ ಪತ್ರದಲ್ಲಿ ಪ್ರಧಾನ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ನಗರ) ರವರು ಅರ್ಜಿಯನ್ನು ಆಹ್ವಾನಿಸಿ ನೋಟರಿ ನಿಯಮಾವಳಿ ರೀತ್ಯ ಪರಿಶೀಲಿಸಿ 4 ಜನರ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 105 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2004**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಎ. ರಘುನಾಥ, ವಕೀಲರು, ನಂ.181, "ಅಮರ್" ಗೋವಿಂದರಾಜನಗರ, 2ನೇ ಕ್ರಾಸ್, ವಿಜಯನಗರ, ಬೆಂಗಳೂರು-40 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬೆಂಗಳೂರು (ನಗರ) ಕಂದಾಯ ತಾಲ್ಲೂಕಿಗೆ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹೆಚ್. ನಾಗೇಂದ್ರಪ್ಪ**

ಪಿ.ಆರ್. 227 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಶ್ರೀ ಎಂ. ಕೃಷ್ಣಮೂರ್ತಿ, ವಕೀಲರು, ಕಾಡುಗೋಡಿ ಇವರನ್ನು ಹೊಸಕೋಟೆ ಕಂದಾಯ ಕ್ಷೇತ್ರದ ನೋಟರಿಯಾಗಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ: 31.1.98ರ ಸರ್ಕಾರಿ ಆದೇಶ ಸಂಖ್ಯೆ: ಲಾ 8 ಎಲ್‌ಸಿಎಲ್ 97.

2) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು, ಗ್ರಾಮಾಂತರ, ಬೆಂಗಳೂರು ರವರ ಪತ್ರ ಸಂಖ್ಯೆ: ಎಡಿಎಂ:91:98, ದಿನಾಂಕ: 10.11.2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 31.1.1998ರ ಸರ್ಕಾರಿ ಆದೇಶದಲ್ಲಿ ಬೆಂಗಳೂರು ಜಿಲ್ಲೆಯ ಹೊಸಕೋಟೆಗೆ 1 ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿದೆ.

ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿರುವ ನೋಟರಿ ಹುದ್ದೆಗೆ ಮೇಲೆ ಓದಲಾಗಿರುವ (2) ದಿನಾಂಕ: 10.11.2003ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ, ಬೆಂಗಳೂರು ರವರು ಅರ್ಜಿಯನ್ನು ಆಹ್ವಾನಿಸಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 102 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2004**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಎಂ. ಕೃಷ್ಣಮೂರ್ತಿ ಬಿನ್ ಎಂ.ಕೆ. ಮುನಿಸ್ವಾಮಯ್ಯ, ನಂ.732,ನ್ಯೂ ಎಕ್ಸ್‌ಟೆನ್‌ಷನ್, ಕಾಡುಗೋಡಿ, ಬೆಂಗಳೂರು-560067, ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹೊಸಕೋಟೆ ಕಂದಾಯ ಕ್ಷೇತ್ರಕ್ಕೆ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹೆಚ್. ನಾಗೇಂದ್ರಪ್ಪ**

ಪಿ.ಆರ್. 228 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಪ್ರಥಮ ರಾಷ್ಟ್ರೀಯ ನ್ಯಾಯಾಂಗ ವೇತನ ಆಯೋಗದ ವೇತನ ಶ್ರೇಣಿಗಳ ಅನುಷ್ಠಾನದಿಂದಾಗಿ ಹೆಚ್ಚುವರಿ ವೆಚ್ಚವನ್ನು ಭರಿಸಲು ಕರ್ನಾಟಕ ಜುಡಿಷಿಯಲ್ ಅಕಾಡಮಿಗೆ 20 ಲಕ್ಷ ರೂ.ಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 161 ಎಲ್‌ಎಸಿ 2003, ದಿನಾಂಕ: 23.10.2003.

2) ನಿರ್ದೇಶಕರು, ಕರ್ನಾಟಕ ಜುಡಿಷಿಯಲ್ ಅಕಾಡಮಿ ಬೆಂಗಳೂರು ಇವರ ಪತ್ರ ಸಂಖ್ಯೆ: ಕೆಜೆಎ:676:2003, ದಿನಾಂಕ: 6/10.11.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 23.10.2003ರ ಸರ್ಕಾರಿ ಆದೇಶದಲ್ಲಿ ಪ್ರಥಮ ರಾಷ್ಟ್ರೀಯ ನ್ಯಾಯಾಂಗ ವೇತನದ ಶಿಫಾರಸ್ಸಿನಂತೆ ಕರ್ನಾಟಕ ರಾಜ್ಯದ ಅಧೀನ ನ್ಯಾಯಾಲಯದ ನ್ಯಾಯಾಂಗ ಅಧಿಕಾರಿಗಳಿಗೆ ಪರಿಷ್ಕೃತ ವೇತನ ಅನುಷ್ಠಾನದಿಂದಾಗಿ ಉಂಟಾಗುವ ಬಾಕಿ ಮೊತ್ತವನ್ನು ಪಾವತಿಸಲು 20 ಲಕ್ಷ ರೂಪಾಯಿಗಳನ್ನು ಹೆಚ್ಚುವರಿ ಅನುದಾನವಾಗಿ ಮಂಜೂರು ಮಾಡುತ್ತ ಸದರಿ ವೆಚ್ಚವನ್ನು 2003-04ನೇ ಸಾಲಿನಲ್ಲಿ ಒದಗಿಸಿರುವ ಆಯವ್ಯಯದ ಉಳಿತಾಯದಿಂದ ಭರಿಸಲು, ಸಾಧ್ಯವಾಗದಿದ್ದ ಪಕ್ಷದಲ್ಲಿ ಮುಂದಿನ ಪೂರಕ ಅಂದಾಜುಗಳಲ್ಲಿ ಸಕ್ರಮಗೊಳಿಸಲು ಆದೇಶ ನೀಡಲಾಗಿತ್ತು.

ಮೇಲೆ ಓದಲಾದ (2)ರ ದಿನಾಂಕ: 6/10.11.2003ರ ಪತ್ರದಲ್ಲಿ ಆಕಾಡಮಿಯ ನಿರ್ದೇಶಕರು ಪ್ರಸ್ತಾವಿತ ಮೊತ್ತವನ್ನು ಹೆಚ್ಚುವರಿ ಅನುದಾನವಾಗಿ ಮಂಜೂರು ಮಾಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 161 ಎಲ್‌ಎಸಿ 2003, ಬೆಂಗಳೂರು, ದಿನಾಂಕ: 22ನೇ ಜನವರಿ 2004**

ಪ್ರಥಮ ರಾಷ್ಟ್ರೀಯ ನ್ಯಾಯಾಂಗ ವೇತನ ಆಯೋಗದ ಶಿಫಾರಸ್ಸಿನನ್ವಯ ರಾಜ್ಯದ ಅಧೀನ ನ್ಯಾಯಾಲಯಗಳ ನ್ಯಾಯಾಂಗ ಅಧಿಕಾರಿಗಳ ವೇತನ ಪರಿಷ್ಕರಣೆಯಿಂದಾಗಿ ನ್ಯಾಯಾಂಗ ಅಕಾಡಮಿಯಲ್ಲಿನ ನ್ಯಾಯಾಂಗ ಅಧಿಕಾರಿಗಳ ಬಾಕಿ ವೇತನ ಪಾವತಿಗಾಗಿ ರೂ.20 ಲಕ್ಷಗಳನ್ನು (ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಹೆಚ್ಚುವರಿ ಅನುದಾನವಾಗಿ ಲೆಕ್ಕ ಶೀರ್ಷಿಕೆ “2014-00-800-8-00-002” ಅಡಿಯಲ್ಲಿ ಮಂಜೂರು ಮಾಡಿದೆ. ಈ ಹಿಂದೆ ಹೊರಡಿಸಲಾಗಿದ್ದ ದಿನಾಂಕ: 23.10.2003ರ ಆದೇಶವನ್ನು ರದ್ದುಪಡಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 26 ವೆಚ್ಚ-7:04, ದಿನಾಂಕ: 20.1.2004 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 229 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಸರ್ಕಾರದ ಉಪಕಾರ್ಯದರ್ಶಿ, ಸಿ.ಆ.ಸು.ಇ. (ಸಾರ್ವಜನಿಕ ದೂರುವಿಭಾಗ ಮತ್ತು ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಸಮಿತಿ) ಹುದ್ದೆಯ ಕೆಲಸದ ಮರು ಹಂಚಿಕೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 7 ಇಕಾಅ 98, ದಿನಾಂಕ: 20.5.1999.

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 97, ದಿನಾಂಕ: 8.11.2002.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: 2 ರಲ್ಲಿ ಓದಲಾದ ದಿನಾಂಕ: 8.11.2002ರ ಆದೇಶದಲ್ಲಿ ಸರ್ಕಾರದ ಉಪಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಸಾರ್ವಜನಿಕ ದೂರು ವಿಭಾಗ) ಹುದ್ದೆಯೊಡನೆ ವಿಶೇಷಾಧಿಕಾರಿ, ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಸಮಿತಿ ಹುದ್ದೆಯನ್ನು ವಿಲೀನಗೊಳಿಸಿ, ಸದರಿ ಹುದ್ದೆಯನ್ನು ಸರ್ಕಾರದ ಉಪಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಸಾರ್ವಜನಿಕ ದೂರು ವಿಭಾಗ ಮತ್ತು ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಸಮಿತಿ) ಎಂದು ಮರು ಪದನಾಮೀಕರಿಸಲಾಗಿರುತ್ತದೆ. ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಸಮಿತಿಯ ಕೆಲಸವನ್ನು ಉಪಕಾರ್ಯದರ್ಶಿ (ಆಡಳಿತ) ಸಿ.ಆ.ಸು.ಇ.ಗೆ ವಹಿಸುವ ಬಗ್ಗೆ ಪರಿಗಣಿಸಲಾಗಿದೆ. ಅಂತೆಯೇ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 9 ಸಸಿವಿ 2004, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2004**

ಸರ್ಕಾರದ ಉಪಕಾರ್ಯದರ್ಶಿ / ಸಹಕಾರ್ಯದರ್ಶಿ, ಸಿ.ಆ.ಸು.ಇ. (ಸಾರ್ವಜನಿಕ ದೂರು ವಿಭಾಗ ಮತ್ತು ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಸಮಿತಿ) ಹುದ್ದೆಯ ಪದನಾಮವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಸಹಕಾರ್ಯದರ್ಶಿ, ಸಿ.ಆ.ಸು.ಇ. (ಸಾರ್ವಜನಿಕ ದೂರು ವಿಭಾಗ) ಎಂದು ಮರು ಪದನಾಮೀಕರಿಸಲಾಗಿದೆ. ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಸಮಿತಿಯಲ್ಲಿ ನಿರ್ವಹಿಸುತ್ತಿರುವ ಕೆಲಸವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಉಪಕಾರ್ಯದರ್ಶಿ (ಆಡಳಿತ) ಸಿ.ಆ.ಸು.ಇ. ಇವರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 232 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## LAW SECRETARIAT

**Subject:** Appointment of Public Prosecutor attached to the Court of II Additional District and Sessions Judge, Mysore to conduct S.C.No.9/2001 Counter Case of SC.No.64/99 on the file of the Principal District and Sessions Judge, Mysore.

**Read:** Letter No. DPN/ADM/112-2003-04 received from the Director of Prosecutions, Bangalore.

**GOVERNMENT ORDER NO. LAW 1991 LMC 2003, BANGALORE, DATED: 19th February 2004**

Government are pleased to appoint the Public Prosecutor attached to the Court of II Additional District and Sessions Judge, Mysore as Special Public Prosecutor to conduct trial in SC.No.9/2001 being the Counter Case of SC.No.64/99 on the file of the Principal District and Sessions Judge's Court, Mysore.

By Order and in the Name of the Governor of Karnataka,

**S. SRIDHARA**

PR-240 Asst. Solicitor & Ex-Officio,

I/c. Under Secretary to Government, Law Department (Lit-II).